

Chandamama, April '52

Photo by A. L. Syed

' ಯಾರದು, ಅಲ್ಲಿ?'

## ಈ ಸಂಚಿಕೆಯಲ್ಲಿ



ಇವಲ್ಲದೆ ಅನೇಕ ವಿಷಯಗಳು ತುಂಬಿವೆ.





# ಯುಗಾದಿಯ ಸಮಯಕ್ಕೆ

**'ಚಂದಮಾಮ' ಈ ಭಾಷೆಗಳಲ್ಲಿ ಹೊರಬೀಳುವುದು.**

ಅಂಬಿಳಿಅಮ್ಮಾವನ್ ★ ಚಾಂದೋಬಾ

(ಮಲಯಾಳ) (ಮರಾಠಿ)

ಬಿಡಿಪ್ರತಿ - **0-6-0**

ವಾರ್ಷಿಕ ಚಂದಾ - **4-8-0**

ಚಂದಮಾಮಾ ಪಬ್ಲಿಕೇಷನ್ಸ್

ಕೋಡಂಬಾಕಮ್ :: ಮದ್ರಾಸು - 24.



**ಮಕ್ಕಳೆಂದರೆ ತಾಯಂದರಿಗೆ ಸಿಹಿ!**

**ಪೆಪ್ಪರಮೆಂಟುಗಳು ಮಕ್ಕಳಿಗೆ ಸಿಹಿ!**

ಸಿಹಿಯುಳ್ಳ ಪೆಪ್ಪರಮೆಂಟುಗಳು




ಯವರದೇ




**M.A.P. INDUSTRIES**

**TONDIARPET. MADRAS.21**

# ಚಂದಮಾಮ
ಮಕ್ಕಳ ಕಥೆಯ ಮಾಸಪತ್ರಿಕೆ





ಸಂಪುಟ ೮ : ಸಂಚಿಕೆ ೪

ಏಪ್ರಿಲ್ ೧೯೫೨


## ಶಾರದಾಸ್ತುತಿ

ಶಾರದಾಂಬೆಯೆ ವಿಧಿಯ ರಾಣಿಯೆ
ವಂದಿಸುವೆ ನಾ ನಿನ್ನನು
ದಾರಿಗಾಣದೆ ಬಳಲುತಿರುವೆನು
ತೋರಿಸೈ ಸತ್ಪಥವನು

ಓದು ಬಾರದ ಬರಹವರಿಯದ
ಮಂದಬುದ್ಧಿಯ ನನ್ನನು
ಓದು ಬರಹಗಳನ್ನು ನೀಡುತ
ಹರಸು ನಿನ್ನಯ ಮಗುವನು

ಸತ್ಯ ಧರ್ಮಗಳಲ್ಲಿ ನಡೆಯುವ
'ಭಾವ'ವೆನ್ನೊಳು ರೂಪಿಸೈ
ನಿತ್ಯ ನಿನ್ನಯ ಸೇವೆಗೈಯುವ
'ಭಾಗ್ಯ'ವೆನ್ನೊಳು ಕರುಣಿಸೈ

ಗುರುಹಿರಿಯರನು ಭಕ್ತಿಭಾವದಿ
ನೋಡಿಕೊಳ್ಳುವ ಶ್ರದ್ಧೆಯ
ವರದೆ ಶಾರದೆ ಬೇಡುವೆನು ನಾ
ಹಾನಿಯಿಲ್ಲದ ವಿದ್ಯೆಯ

—ಬಿ. ರಾಮಚಂದ್ರಭಟ್ಟ.





# ವ್ಯರ್ಥ ಕಲಹ

ಒಮ್ಮೆ ಮೂಗಿಗೂ ಕಣ್ಣುಗಳಿಂಗೂ,
ನಡುವೆ ತಗಾದೆ ತೊಡಗಿತ್ತು;
'ಕಣ್ಣಡಕವು ಯಾರ'ದೆಂಬ ವಾದದ
ಚರ್ಚೆ ಜೋರಾಗಿ ನಡೆದಿತ್ತು

ಶ್ರೀಮನ್ನಾಲಗೆ ವಕೀಲರಾಗಿ
ತೀವ್ರ ವಾದವನೆ ನಡೆಸಿದರು
ಜಿಗಿದು ನೆಗೆದು ಇರುದವಡೆಗಳ ನಡುವೆ
ಮೇಲೆ ಗುದ್ದಿ ಘುಡುಘುಡಿಸಿದರು

ಕಿವಿಗಳು ನ್ಯಾಯಾಧೀಶರು ತಾವೆಂದು
ಕಿವಿ ನಿಗುರಿಸುತಲಿ ಕೇಳಿದರು
'ನಾವೇನು ಕುರುಡರೆ? ಚೆನ್ನಾಗಿ ಚಿಂತಿಸಿ
ನ್ಯಾಯನುಡಿವೆ'ವೆಂದು ಹೇಳಿದರು

ನಾಲಗೆ ಲಾಯರು ನುಡಿದರು; 'ಪ್ರಭುವೇ!
ಕಣ್ಣಡಕವ ಪರಿಕಿಸಿ ನೋಡೀ,
ಮೂಗಿಗಾಗಿ ಅದು ಜನಿಸಿಹುದೆಂದೇ
ಕಾಣುವುದನು ಅಲ್ಲೆನಬೇಡಿ!

ಇಷ್ಟಲ್ಲದೆ ಅದು ಮೂಗಿನ ಮೇಲೆಯೆ
ಏರಿ ಕುಳಿತು ಮೆರೆವುದು ನಿತ್ಯಾ
ಮೂಗಿನ ಸೊತ್ತದು ಸತ್ಯವಲ್ಲದೆ
ಬೇರುಂಟೆಂಬುದು ಬಹುಮಿಥ್ಯ

ಇದರಿಂ ತಿಳಿಯುವ ಗುಟ್ಟೇನೆಂದರೆ
ಮೂಗು–ಕಣ್ಣಡಕ ಅವು ಎರಡು,
ಒಂದಕೊಂದು ಆಧಾರವಾಗಿಹವು
ಮತ್ತೆಲ್ಲಾ ಮಾತೂ ಬರಡು!'

"ನವಗಿರಿನಂದ"
ತೆಲುಗಿನಿಂದ

ಮೂಗಿನ ಕಕ್ಷಿಗೆ ವಾದಿಸಿ ಹೀಗೆ
ಕುಳಿತರು ನಾಲಿಗೆ ಜಮ್ಮೆಂದು
ಪಾಪ, ಕಣ್ಣುಗಳ ಪಕ್ಷಕೆ ಅದುವೇ
ಪ್ರತಿವಾದನೆಯೂ ಆಯ್ತೆಂದು

ನ್ಯಾಯಮೂರ್ತಿ ಶ್ರೀ ಕಿವಿಮಹಾಪ್ರಭು
ಠೀವಿಯಲೆಲ್ಲಾ ಕೇಳಿದರು
ತಲೆಯಲ್ಲಾಡಿಸಿ, ಗಂಟಲ ಕೆನೆದು
ತೀರ್ಪನ್ನೀಪರಿ ಹೇಳಿದರು:—

"ಕೇಳಿದೆನೆಲ್ಲವ, ಈ ಕಣ್ಣಡಕವು
ಮೂಗಿನದೆಂದೇ ನಿಜವಾಯ್ತು
ಕಣ್ಣಡಕವಿರಲು ಕಂಗಳು ಮುಚ್ಚುತ
ಇರಬೇಕೆಂದೇ ರುಜುವಾಯ್ತು!"

ವಿಚಿತ್ರವಾದೀ ತೀರ್ಪನು ಕೇಳಿ
ಕಂಗಳು ಇಂಗಿ ಮಂಗಿದುವು.
ಬಲಗೈ ಕೋರ್ಟಿಗೆ ಅಪೀಲು ಮಾಡಿ
ಕಂಬನಿ ಸುರಿದು ಬೇಡಿದುವು.

ಕಾರ್ಯವೀರ 'ಕೈ' ಹೈಕೋರ್ಟ್ ಜಡ್ಜರು
ಕೇಳಿ ನುಡಿದರೆಲೆ 'ಮೂಢರಿರಾ!
ಕಣ್ಣು ಮುಚ್ಚಿರಲು ಕಣ್ಣಡಕವೇಕೆ?
ಕಿತ್ತೆಸೆವೆನು ನಾ ನೋಡುವಿರಾ?

ಕಣ್ಣಿಗಾಗಿ ಕಣ್ಣಡಕ ಬಂದಿದೇ
ನಾನಿಡೆ ಮೂಗಿನ ಮೇಲೆ ಇದೆ.
ಕಿವಿಯೂ ಹಿಡಿದಿದೆ, ಇದನರಿತೊಂದಾಗಿ
ಬಾಳಿರಿ ಕಲಹಿಸದೆ ಬರಿದೇ'



## ಅಣ್ಣನ ಪತ್ರ

ಒಲವಿನ ತಮ್ಮ ತಂಗಿಯರೇ,

ನಿಮ್ಮಲ್ಲನೇಕರು ಈಚೆಗೆ ಅಣ್ಣನ ಪತ್ರವೇ ಬರುವುದಿಲ್ಲವಲ್ಲ ಏಕೆ, ಎಂದು ಪುನಃ ಪುನಃ ಕೇಳಿರುವಿರಿ. ಇಗೋ, ಅದಕ್ಕೇ ಈಗ ಉತ್ತರವಾಗಿ ಪತ್ರ ಬರೆಯುತ್ತಿದ್ದೇನೆ.... ಯಾವಾಗಲೂ ಅಪರೂಪವಾದವುಗಳ ಮೇಲೆ ಆಸಕ್ತಿ ಹೆಚ್ಚಂತೆ. ನಿಜವಲ್ಲವೆ, ನೀವೇ ಹೇಳಿ?

ಸಲಸಲಕ್ಕೂ ಅಣ್ಣನ ಪತ್ರದಿಂದ ಪುಟ ತುಂಬುವುದಕ್ಕಿಂತ ಅಂತಹ ಸ್ಥಳದಲ್ಲಿ ಇನ್ನಷ್ಟು ಮನರಂಜಕ ವಿಷಯ ಕೊಡಬೇಕೆಂಬುದೇ ನನ್ನ ಉದ್ದಿಶ್ಯ. ಚಂದಮಾಮ ಸ್ವಂತ ಭವನದೊಳಕ್ಕೆ ಬಂದಾಗಿನಿಂದ ಹೆಚ್ಚು ಕೆಲಸಗಳಲ್ಲಿ ನಿರತನಾಗಿದ್ದಾನೆ. ತೆಲುಗು, ತಮಿಳು, ಕನ್ನಡ, ಹಿಂದಿ ಮಕ್ಕಳು ಮಾತ್ರವೇಕೆ, ಮಹಾರಾಷ್ಟ್ರ ಮತ್ತು ಮಲಯಾಳದಲ್ಲೂ ಮಕ್ಕಳಿಲ್ಲವೆ? ಅವರನ್ನೂ ಆನಂದಸಾಗರದಲ್ಲಿ ಆಟವಾಡಿಸಲು ಚಂದಮಾಮ ಆ ಎರಡು ಭಾಷೆಗಳಲ್ಲೂ ಅವರ ಕೈಗಳಲ್ಲಿ ನಲಿದಾಡಲು ಸಿದ್ಧವಾಗುತ್ತಿದ್ದಾನೆ. ಆದರೆ ಕನ್ನಡ ಮಕ್ಕಳು ತೋರಿದ, ಮತ್ತು ತೋರಿಸುತ್ತಿರುವ ವಿಶಿಷ್ಟ ಆದರಾಭಿಮಾನಗಳು ಚಂದಮಾಮನಿಗೆ ಹೆಮ್ಮೆಯ ವಿಷಯ. ಅದು ಎಂದಿಗೂ ಅಳಿಯದಂತಹದು. ಮುಂದೆ ಸಮಯ ಸಿಕ್ಕಾಗ ಮತ್ತೆ ಬರೆಯುವೆನು.

ಜೈ ಹಿಂದ್.

ನಿಮ್ಮ ಅಣ್ಣ.

ಎಂ. ಟಿ. ವಿ. ಆಚಾರ್ಯ

## ಚಂದಿರಮಾಮ

ಚಂದಿರಮಾಮ ಚಂದಿರಮಾಮ
ಬಾರೋ ಇಲ್ಲಿಗೆ,
ಮೋಡಗಳೆಡೆಯಲಿ ಆಗಸ ಮಧ್ಯದಿ,
ಹೊರಟಿಹೆ ಎಲ್ಲಿಗೆ?

ಅಮ್ಮನು ಕೊಟ್ಟಿಹ ಹೋಳಿಗೆಯನ್ನು
ನಿನಗೇ ಇಟ್ಟಿರುವೆ,
ಅಕ್ಕನು ಕಾಸಿಹ ಬಿಸಿ ಬಿಸಿ ಹಾಲನು
ಕದ್ದೂ ತಂದಿರುವೆ.

ಭಾವನ ಬಣ್ಣದ ಪುಸ್ತಕ ತಂದು
ಕಾಯುತ ನಿಂತಿರುವೆ?
ಕೈಗಳ ನೀಡಿ ಕರೆಯುವ ಎನ್ನನ
ಏತಕೆ ಮರೆತಿರುವೆ?

ಬೆಳಕನು ಇತ್ತೇ ಬದುಕುವ ನಿನಗೆ
ಯಾತರ ಸುಖವಲ್ಲಿ?
ನಾಟಕ, ಸಿನಿಮಾ ಬೇಸರ ಕಳೆಯಲು
ಎಷ್ಟೋ ಇದೆ ಇಲ್ಲಿ.

ಸಿಡಿಲಿನ ಅಬ್ಬರ, ಮಿಂಚಿನ ಉಬ್ಬರ
ತುಂಬಿದ ಭಯವಲ್ಲಿ,
ಮರೆಯದ ಗೆಳೆತನ ನನಗೂ ನಿನಗೂ
ಬರುವೆಯ ನೀನಿಲ್ಲಿ?

—ಹೊಸಮನಿ ಗೋವರ್ಧನ್, ಮೂಡಬಿದ್ರೆ



# ಸೂರ್ಯ ಕಿರಣ

ಪೂರ್ವಕಾಲದಲ್ಲಿ ಘೂರ್ಜರದೇಶವನ್ನು ಆಳಿದ ರಾಜರಲ್ಲಿ ಒಬ್ಬಾತನಿಗೆ ಕುದುರೆಗಳೆಂದರೆ ತುಂಬಾ ಮೋಜು. ಬೆಟ್ಟದಷ್ಟು ಹಣ ಸುರಿದು, ಒಳ್ಳೆ ಕುದುರೆಗಳು ಯಾವ ದೇ ದೇಶದಲ್ಲಿದ್ದರೂ ಅಲ್ಲಿಂದ ತರಿಸಿ, ತನ್ನ ಅಶ್ವ ಶಾಲೆಯಲ್ಲಿ ಕಟ್ಟಿಸುತ್ತಿದ್ದ. ಎಷ್ಟೇ ತುರ್ತಾದ ರಾಜ ಕಾರ್ಯಗಳಿದ್ದರೂ ಪ್ರತಿದಿನವೂ ಒಂದು ಸಾರಿಯಾದರೂ ಅವಕಾಶ ಮಾಡಿಕೊಂಡು ಅಶ್ವಶಾಲೆಗೆ ಭೇಟಿಕೊಡುತ್ತಿದ್ದ. ತನ್ನ ಕುದುರೆಗಳೆಲ್ಲವನ್ನೂ ಸ್ವತಃ ನೋಡಿ, ಅವುಗಳ ಕೊರಳನ್ನು ಪ್ರೀತಿಯಿಂದ ತಟ್ಟಿ, ಮಾತನಾಡಿಸಿಕೊಂಡು ಬಂದ ಹೊರತು, ಆತನ ಮನಸ್ಸಿಗೆ ಸಮಾಧಾನವಿರುತ್ತಿರಲಿಲ್ಲ. ಕುದುರೆಗಳೆಂದರೆ ಅಷ್ಟು ಮೋಜು ಇದ್ದುದರಿಂದ ಆತನಿಗೆ "ಕುದುರೆಗಳ ರಾಜ" ಎಂಬ ಹೆಸರು ಅನ್ವರ್ಥನಾಮವಾಗಿ ಉಳಿಯಿತು.

ಒಂದು ದಿನ ಆತನ ಸಭೆಯನ್ನು ಮುಗಿಸಿ ಆರಾಮವಾಗಿ ಕುಳಿತಿರುವಾಗ ದ್ವಾರಪಾಲಕನು ಬಂದು "ಮಹಾಪ್ರಭೂ, ಅರಬ್ಬೀ ದೇಶದವನೊಬ್ಬ ಕುದುರೆಯೊಂದಿಗೆ ಬಂದಿದ್ದಾನೆ. ತಮ್ಮನ್ನು ಸಂದರ್ಶಿಸಬೇಕಂತೆ" ಎಂದ. ಕುದುರೆ ಎಂಬ ಮಾತು ಕಿವಿಗೆ ಬಿದ್ದಿತೋ ಇಲ್ಲವೋ ಆ ಅರಬ್ಬಿಯವನನ್ನು ನೋಡುವ ಸಲುವಾಗಿ ರಾಜನು ತಟಕ್ಕನೆ ಎದ್ದು ತರಾತುರಿಯಿಂದ ಹೊರಗೆ ಬಂದ.

ಅರಬ್ಬಿಯವನು ರಾಜನನ್ನು ನೋಡಿದ ಕೂಡಲೇ ಬಗ್ಗಿ ಸಲಾಮು ಮಾಡಿ 'ಪ್ರಭುಗಳೇ ಇದೊಂದು ಅಪೂರ್ವ ಅಶ್ವ; ಈ ಕುದುರೆಗೆ ಅನೇಕ ಗಿರಾಕಿಗಳು ಬಂದಿದ್ದವು. ಆದರೆ ಅವರಿಗೆ ಕೊಡಲು ನಿರಾಕರಿಸಿ, ನಿಮಗೆ ಸಮರ್ಪಿಸಲು ತೆಗೆದುಕೊಂಡು ಬಂದಿದ್ದೇನೆ. ಈ ಕುದುರೆಯ ಜಾತಿ, ಅದರ ಗುಣ ಮುಂತಾದುವನ್ನು ನಾನೇ ವರ್ಣಿಸುವುದು ಸಮಂಜಸವಲ್ಲ. ನಮ್ಮ ಅರೇಬಿಯಾದೇಶದಲ್ಲಿ ಇಂತಹ ಮತ್ತೊಂದು ಕುದುರೆಯಿಲ್ಲವೆಂದರೆ ಅತಿಶಯೋಕ್ತಿಯಲ್ಲ. ಆದುದರಿಂದಲೇ ಅಶ್ವ ಪರೀಕ್ಷೆಯಲ್ಲಿ ಮಹಾಸ್ವಾಮಿಯವರು ಗಟ್ಟಿಗರೆಂದು ಕೇಳಿ, ಈ ಕುದುರೆ ಇದ್ದರೆ ನಿಮ್ಮಂತಹ ಪೋಷಕರ ಹತ್ತಿರಲೇ ಇರಬೇಕೆಂದು, ತೆಗೆದುಕೊಂಡು ಬಂದಿದ್ದೇನೆ" ಎಂದ.

ಜಿ. ಸುಭದ್ರ - ಅನಂತಪುರ



ಅದಕ್ಕೆ ರಾಜನು "ಸರಿ, ಇದರ ಬೆಲೆಯೆಷ್ಟು" ಎಂದ.

"ಎಷ್ಟೇ- ಬಹಳವೇನಿಲ್ಲ. ಒಂದು ಲಕ್ಷ ವರಹಗಳು, ಅಷ್ಟೇ" ಎಂದನಾತ.

ರಾಜನು ಆಶ್ಚರ್ಯಚಕಿತನಾಗಿ "ಅಯ್ಯಾ, ಎಷ್ಟೇ ಅಪೂರ್ವವಾದ ಕುದುರೆಯಾದರೂ ಒಂದು ಲಕ್ಷ ಅಂದರೇನು ಸಾಮಾನ್ಯವೇ? ತುಂಬಾ ಸೋಜಿಗವಾಗಿದೆ. ನನ್ನ ಅಶ್ವ ಶಾಲೆಯಲ್ಲಿ ತುಂಬಾ ಶ್ರೇಷ್ಠವಾದ, ಉತ್ತಮವಾದ 'ವಾಯುವಾಹನ'ವೆಂಬ ಅಶ್ವಕ್ಕೆ ಇಪ್ಪತ್ತೈದು ಸಾವಿರಕ್ಕಿಂತಲೂ ಹೆಚ್ಚು ಕೊಡಲಿಲ್ಲ. 'ರಾಮಬಾಣ' ಎಂಬ ಕುದುರೆಗೆ ಹದಿನೈದು ಸಾವಿರ ಕೊಟ್ಟರೆ ಅದರ ಯಜಮಾನ ಆ ಹಣವನ್ನು ಕಣ್ಣಿಗೆ ಹಚ್ಚಿಕೊಂಡು, ಕುದುರೆ ಸಮರ್ಪಿಸಿ ಹೋದ. ತಿಳಿಯಿತೇ? ಇನ್ನು 'ವೇಗವತಿ' ಎಂಬ ಕುದುರೆ ಬೆಲೆ ಹೇಳುತ್ತೇನೆ ಕೇಳು, ಅದು ಹತ್ತು ಸಾವಿರ" ಎಂದ.

ಆಗ ಅರಬ್ಬಿಯವನು "ಪ್ರಭೂ ನೀವು ಚೌಕಾಸಿ ಮಾಡುವುದಿಲ್ಲವೆಂದು ಒಂದು ಲಕ್ಷ ಎಂದು ಒಂದೇ ಮಾತಿನಲ್ಲಿ ಹೇಳಿಬಿಟ್ಟೆ. ಮತ್ತೆ ಯಾರಾದರೂ ಆಗಿದ್ದರೆ ಎರಡು ಲಕ್ಷ ಹೇಳುತ್ತಿದ್ದೆ" ಎಂದ.

ರಾಜನಿಗೆ ತುಂಬಾ ಅಚ್ಚರಿ ಆಯಿತು. "ನಿನ್ನ ಕುದುರೆಯ ಹೆಗ್ಗಳಿಕೆಯಾದರೂ ಏನು?" ಎಂದು ಕೇಳಿದ.

"ಅದರ ದೊಡ್ಡಸ್ತಿಕೆಯನ್ನು ನಾನು ಹೊಗಳುಭಟ್ಟನಂತೆ ವರ್ಣಿಸುವುದು ಸರಿಯಾಗಿ ಕಾಣಿಸುವುದಿಲ್ಲ. ಅದನ್ನು ಕೊಂಡುಕೊಂಡು ನೋಡಿ. ನಿಮಗೆ ಗೊತ್ತಾಗುತ್ತದೆ" ಎಂದ ಅರಬ್ಬಿಯವನು.

ಅದೇನೋ ನೋಡಿಯೇ ಬಿಡೋಣವೆಂಬ ಹಠ ಮತ್ತು ಆತುರದಿಂದಲೂ, ಕುದುರೆಗಳೆಂದರೆ ಸಹಜವಾಗಿದ್ದ ಮೋಜಿನಿಂದಲೂ, ಅಲ್ಲಿಯೇ ಇದ್ದ ಮಂತ್ರಿಯ ಕಡೆ ನೋಡಿ "ಒಂದು ಲಕ್ಷ ವರಹ ತರಿಸಿ ಈತನಿಗೆ ಕೊಡಿ" ಎಂದ ರಾಜ.

ಮಂತ್ರಿ ನಿರ್ಘಾಂತನಾದ. "ಪ್ರಭೂ ಒಂದು ಸಾರಿ ಆಲೋಚಿಸಿ. ಒಂದು ಸಾವಿರವಲ್ಲ, ಎರಡು ಸಾವಿರವಲ್ಲ; ಲಕ್ಷ ವರಹಗಳು! ತೀರಾ ಕೈಮೀರಿದ ತರುವಾಯ ಏನೆಂದುಕೊಂಡರೂ ಲಾಭವಿರಲಾರದು" ಎಂದ ರಹಸ್ಯವಾಗಿ.

ರಾಜನು "ಕೊಡಿ, ನೋಡಿಯೇ ಬಿಡೋಣ" ಎಂದ. ಹೇಳಲು, ವಿಧಿಯಿಲ್ಲದೆ ಲಕ್ಷ ವರಹ ಗಳನ್ನು ತರಿಸಿ, ಅರಬ್ಬಿಯವನಿಗೆ ಕೊಟ್ಟ ಮಂತ್ರಿ.

ಅರಬ್ಬಿಯವನು ಆ ಹಣದ ಮೂಟೆ ತೆಗೆದುಕೊಂಡು ತನ್ನ ಕುದುರೆಯನ್ನು ಸಮೀಪಿಸಿ, ತಟಕ್ಕನೆ ಅದರ ಬೆನ್ನಮೇಲೇರಿ 'ಚಲ್' ಎಂದ. ಮತ್ತೇನಿದೆ? ರಾಜ, ಮಂತ್ರಿ, ಸೇನಾಧಿಪತಿ ಎಲ್ಲಾ ನೋಡುತ್ತಿರುವಂತೆಯೇ ಆ ಕುದುರೆ ವಾಯುವೇಗದಲ್ಲಿ ಓಡಿತು.

ರಾಜನ ಮುಖ ವಿವರ್ಣ ಹೊಂದಿತು. "ಅರೆರೆ, ಲಕ್ಷ ವರಹ ತೆಗೆದುಕೊಂಡು, ಕುದುರೆ ಮೇಲೇರಿ ಪರಾರಿಯಾಗುತ್ತಿದ್ದಾನಲ್ಲಾ ಭಂಡ! ಹಿಡಿಯಿರಿ, ಹಿಡಿಯಿರಿ ಅವನನ್ನು" ಎಂದು ಕಿರಿಚಿದ.

ತಕ್ಷಣವೇ ಆತನ ಆಸ್ಥಾನದಲ್ಲಿದ್ದ ಸವಾರರು ಅರಬ್ಬಿಯವನನ್ನು ಹಿಡಿಯಲು ತಮ್ಮ ಕುದುರೆಗಳನ್ನು ಹತ್ತಿ ಹಿಂಬಾಲಿಸಿದರು.

ವಾಯುವಾಹನ, ರಾಮಬಾಣ, ವೇಗವತಿ ಮುಂತಾದ ಉತ್ತಮ ಅಶ್ವಗಳನ್ನೇರಿ ಅರಬ್ಬಿಯವನನ್ನು ಅಟ್ಟಿಕೊಂಡು ಹೋದರು ಆ ಸವಾರರು.

ರಾಜನು 'ನಮಗೆ ನಂಬಿಕೆಯುಂಟಾಗುವಂತೆ ನಟಿಸಿ, ಲಕ್ಷ ವರಹ ಲಪಟಾಯಿಸಿ ಮೋಸ ಮಾಡಿದನಲ್ಲಾ, ದುರುಳ' ಎಂದು ಚಿಂತಿಸಿದ.




"ಪ್ರಭೂ ನಾನು ಹೇಳಿದರೆ ನೀವು ಕೇಳಲಿಲ್ಲ" ಎಂದು ಇದೇ ಸಮಯವೆಂದು ಮಂತ್ರಿ ಮೆಲ್ಲನೆ ಮೂದಲಿಸಿದ.

ರಾಜನು ಬೇಸರಗೊಂಡು "ನೀನೇನಯ್ಯಾ ಹೇಳಿದೆ? ಅವನು ಈ ರೀತಿ ಹಣ ತೆಗೆದುಕೊಂಡು ಪರಾರಿಯಾಗುವನೆಂದು ಹೇಳಿದೆಯಾ? ಇಂತಹ ವಿಚಾರಗಳಲ್ಲಿ ಮುಚ್ಚುಮರೆ ಏನು ಬಂತು. ಸ್ಪಷ್ಟವಾಗಿ ನುಡಿಯಬೇಕು" ಎಂದು ಗದರಿಸಿದ.

ಇಷ್ಟರಲ್ಲಿ ದೂರದಲ್ಲಿ ಧೂಳು ಮೇಲೇರುತ್ತಿರುವುದು ಕಾಣಿಸಿತು. ಅರಬ್ಬಿಯವನ ಸುಳಿವು ಸಿಕ್ಕದೆ ವಾಯುವಾಹನವೋ, ರಾಮಬಾಣವೋ, ಇಲ್ಲ ವೇಗವತಿಯೋ ಹಿಂತಿರುಗಿ ಬರುತ್ತಿರಬಹುದೆಂದುಕೊಂಡ ರಾಜ ಎಲ್ಲ ಆಶೆಯನ್ನು ತೊರೆದು.

"ಅಷ್ಟಲ್ಲದೆ ಮತ್ತೇನು?" ಎಂದ ಮಂತ್ರಿ.

ಇಷ್ಟರಲ್ಲಿ ಲಕ್ಷ ವರಹದ ಕುದುರೆ ಬಂದು ಪ್ರಭುಗಳ ಮುಂದೆ ನಿಂತಿತು. ಅದರ ಮೇಲಿಂದ ಅರಬ್ಬಿಯವನು ಕೆಳಗೆ ಇಳಿದು "ಸಲಾಂ, ಮಹಾರಾಜ್. ತಾವು ಇಲ್ಲಿ ನಿಂತಿರುವಾಗಲೇ ನಾನು ಈ ಕುದುರೆಯೇರಿ ಐವತ್ತು ಮೈಲಿ ದೂರ ಸುತ್ತಿ ಬಂದಿದ್ದೇನೆ. ನನ್ನನ್ನು ಅಟ್ಟಿಸಿಕೊಂಡು ಹೊರಟ ನಿಮ್ಮ ಅತಿರಥ ಮಹಾರಥರಾದ ಸವಾರರು ಇಲ್ಲಿಗೆ ಬಂದು ಸೇರಲು ಇನ್ನೂ ಕನಿಷ್ಠ ಪಕ್ಷ ಮೂರು ಗಂಟೆಗಳಾಗಬಹುದು. ಆಗ ನಾನು ನಿಮ್ಮೊಂದಿಗೆ 'ಈ ಕುದುರೆಯನ್ನು ಕೊಂಡು ನೋಡಿ, ಇದರ ಬೆಲೆ ತಿಳಿಯುವುದು' ಎಂದು ಹೇಳಿದ್ದೆನಷ್ಟೇ. ಈ ಕುದುರೆ ಒಂದು ಲಕ್ಷ ವರಹ ಬೆಲೆ ಬಾಳುವುದೋ ಇಲ್ಲವೋ ಈಗಲಾದರೂ ಹೇಳಿ" ಎಂದ.

ರಾಜನು ಆಶ್ಚರ್ಯ ಆನಂದದಿಂದ "ಭೇಷ್! ಲಕ್ಷವಲ್ಲ, ಹತ್ತು ಲಕ್ಷ ಬೆಲೆಬಾಳುತ್ತದೆ. ಇಂತಹ ವಿಚಿತ್ರವಾದ ಅಶ್ವವನ್ನು ನಾವಿಂದಿನವರೆವಿಗೂ ನೋಡಿಯೇ ಇರಲಿಲ್ಲ. ನಿನ್ನ ನುಡಿಗಳು ಅಸತ್ಯವಲ್ಲವೆಂದು ಈಗ ರುಜುವಾತಾಗಿದೆ. ನಾನೇಕೆ ಮುಚ್ಚಿಡಬೇಕು. ನೀನು ಲಕ್ಷ ವರಹ ತೆಗೆದುಕೊಂಡು ಕುದುರೆಯೊಂದಿಗೆ ಪರಾರಿಯಾದೆ ಎಂದುಕೊಂಡಿದ್ದೆವು ನಾವು" ಎಂದ.

"ಎಂತಹ ಮಾತು ಮಹಾರಾಜ್. ಹಾಗೆ ನಂಬಿಸಿ ಮೋಸ ಮಾಡುವುದು ನಮ್ಮ ಮನೆತನಕ್ಕೆ ಬಂದಿಲ್ಲ. ಮಹಾರಾಜರಿಗೆ ಇದರ ಶಕ್ತಿ ಸಾಮರ್ಥ್ಯ ಮಾತಿನಲ್ಲಿ ಅಲ್ಲದೆ ಕಾರ್ಯತಃ ಮಾಡಿ ತೋರಿಸೋಣವೆಂದು ಈ ರೀತಿ ಮಾಡಿದೆ. ಈ ಕುದುರೆಯ ಹೆಸರು 'ಸೂರ್ಯಕಿರಣ' ಸೂರ್ಯನಕಾಂತಿ ಎಷ್ಟು ವೇಗವಾಗಿ ಪಸರಿಸುವುದೋ ಅಷ್ಟು ವೇಗವಾಗಿ ಇದು ಓಡಬಲ್ಲದು. ಪ್ರಭುಗಳು ಇದನ್ನು ಸ್ವೀಕರಿಸಿ, ನನಗೆ ಉಚಿತ ಬಹುಮಾನ ಕೊಡಿಸಿ ಕೊಡಬೇಕು' ಎಂದು ವಿನಯಪೂರ್ವಕವಾಗಿ ಕೇಳಿದ. 'ಸೂರ್ಯಕಿರಣ'ದ ಹಿರಿಮೆಗೂ, ಅರಬ್ಬಿಯವನ ಸತ್ಯಸಂಧತೆಗೂ ಮೆಚ್ಚಿಕೊಂಡು ರಾಜನು ಮತ್ತೊಂದು ಹತ್ತು ಸಾವಿರ ರೂಪಾಯಿಗಳನ್ನು ಬಹುಮಾನವಾಗಿ ಅರಬ್ಬಿಯವನಿಗೆ ಕೊಟ್ಟು, ಕಳುಹಿಸಿದ.





## 3

'ತಾನೂ ಸಹ ತೀರಿಕೊಂಡರೆ ಯುವರಾಜನಿಗೆ ದಿಕ್ಕು ಯಾರು?' ಎಂಬ ಸಮಸ್ಯೆಯಿಂದ ಕೃಪಾಸಿಂಹನ ಮನಸ್ಸು ತುಂಬಾ ಕಳವಳಗೊಂಡಿತು. ಕಳವಳ ಅಷ್ಟೇ ಅಲ್ಲ. ಅದೇ ಚಿಂತೆಯಿಂದ ಕೊರಗಿ ಮತ್ತೆ ಕೆಲವು ದಿನಗಳಲ್ಲೇ ತನ್ನ ಪತ್ನಿಯನ್ನು ಸೇರಿದ. ತಂದೆ ಗತಿಸಿದನಾದುದರಿಂದ, ಪಾಪ, ಹಸುಳೆ ದೇವಸಿಂಹನು ದಿಕ್ಕಿಲ್ಲದ ಅನಾಥನಾದನು.

'ಎಳೆ ಹುಡುಗ, ಅಂಗವಿಕಲ, ತಾಯಿಯಿಲ್ಲ, ತಂದೆಯಿಲ್ಲ. ಈ ಮಗುವನ್ನು ಜಾಗರೂಕತೆಯಿಂದ ಕಾಪಾಡುವವರು ಯಾರು?' ರಾಜ್ಯದ ಪ್ರತಿಯೊಬ್ಬರ ಬಾಯಿಯಲ್ಲೂ ಇದೇ ಪ್ರಶ್ನೆ. ಇದೇ ಜಿಜ್ಞಾಸೆ. ರಾಜಕುಮಾರನ ಗತಿ ಏನಾಗುವುದೋ ಎಂದು ಪ್ರತಿಯೊಬ್ಬನ ಹೃದಯವೂ ತಹತಹಪಡುತ್ತಿತ್ತು.

ರಾಜ್ಯವೆಲ್ಲಾ ಈ ರೀತಿ ತಳಮಳಗೊಂಡಿರುವ ಸಮಯದಲ್ಲಿ ಪ್ರಜೆಗಳ ವ್ಯಥೆಯನ್ನು ತುಸ ಕಡಿಮೆಮಾಡುವ ಒಂದು ಸಣ್ಣ ಪ್ರಸಂಗ ನಡೆಯಿತು. ಭಾವಮೈದುನನ ಮರಣಕ್ಕೆ ಅಪಾರವಾದ ದುಃಖ ತೋರಿಸುತ್ತಿದ್ದ ಶಕ್ತಿಸಿಂಹನು ಸ್ವಲ್ಪ ಚೇತರಿಸಿಕೊಂಡು ಆಸ್ಥಾನದ ಮುಖ್ಯಸ್ಥರನ್ನೆಲ್ಲಾ ಒಂದು ದಿನ ದರ್ಬಾರಿಗೆ ಬರಮಾಡಿಕೊಂಡ. ತುಂಬಾ ಸಂತಾಪದಿಂದ ಎಲ್ಲರ ಸಮ್ಮುಖದಲ್ಲಿ ಈ ರೀತಿ ನುಡಿದ:

"ಪ್ರಜೆಗಳೇ, ಈ ರಾಜ್ಯವನ್ನು ಉತ್ತಮ ರೀತಿಯಲ್ಲಿ ನಡೆಯಿಸಿಕೊಂಡು ಬಂದ ಸಮರ್ಥರು ನೀವು. ನಿಮ್ಮ ಸಲಹೆಗಳ ಮೇರೆಗೆ ನಮ್ಮ ಭಾವಂದಿರು ಈ ದೇಶವನ್ನು ರಾಮರಾಜ್ಯದಂತೆ ಪರಿಪಾಲಿಸುತ್ತಿದ್ದರು. ಪ್ರಜೆಗಳೆಲ್ಲರೂ ಸುಖಸಂತೋಷಗಳಿಂದ ಇರುವ ಹಾಗೆ ಮಾಡಿದ್ದರು. ಅಂತಹ ಭಾವಂದಿರನ್ನು ಉಳಿಸಿಕೊಳ್ಳಲಾರದ ದುರದೃಷ್ಟವಂತ ನಾನು.



ಆಕಸ್ಮಿಕವಾಗಿ ನಮ್ಮ ಅಕ್ಕಂದಿರು ನಮ್ಮನ್ನು ಅಗಲಿ ಹೋದರು. ಈ ರೀತಿ ಏಟಿನಮೇಲೆ ಏಟು ಬಿದ್ದುದಕ್ಕೆ ನಾನೆಂದೋ ಸತ್ತು ಹೋಗ ಬೇಕಿತ್ತು. ಆದರೆ ಈ ದುರದೃಷ್ಟವಂತ, ಅಭಾಗ್ಯ, ಇನ್ನೂ ಏಕೆ ಜೀವಿಸಿರುವನೋ ನೀವೇ ಊಹಿಸಿ....ಇದೋ, ಈ ಹಸುಳೆಗಾಗಿ, ಅಂಗವಿಕಲನಾದ ಈ ಹುಡುಗನಿಗಾಗಿ. ಅಕ್ಕ ಭಾವ ಇಬ್ಬರೂ ಸೇರಿ ಈ ಸಣ್ಣ ಮಗುವನ್ನು ನನ್ನ ಕೈಯಲ್ಲಿಟ್ಟು ಹೋಗಿದ್ದಾರೆ. ಇವನನ್ನು ಏನು ಮಾಡಲೂ ತೋರದೆ ಇನ್ನೂ ಜೀವಿಸಿದ್ದೇನೆ. ಇವನನ್ನು ಹೇಗೆ ಕಾಪಾಡಲಿ? ಬುದ್ಧಿವಂತರಾದ ತಾವು ಚೆನ್ನಾಗಿ ಪರ್ಯಾಲೋಚಿಸಿ, ಉಚಿತವಾದ ಸಲಹೆ ಕೊಟ್ಟಪಕ್ಷಕ್ಕೆ, ಈ ಹಸುಳೆಯನ್ನು ನಿಮ್ಮ ಕೈಗೆ ಒಪ್ಪಿಸಿ, ನನ್ನ ದಾರಿ ನಾನು ಹಿಡಿಯುವೆನು. ಈ ಮಗುವಿನ ಸಂಗತಿ ನೆನೆಸಿದ ಮಾತ್ರಕ್ಕೆ ಎದೆ ಬಿರಿಯುತ್ತಿದೆ. ನಿರಂತರವೂ ಇವನನ್ನು ನೋಡುತ್ತಾ ಹೇಗಿರಬಲ್ಲೆ?" ಎಂದು ಹೇಳಿ ಸುಮ್ಮನಾದ.

ಶಕ್ತಿಸಿಂಹನ ಮಾತುಗಳನ್ನು ಕೇಳಿ ಎಲ್ಲರೂ ದಿಗ್ಭ್ರಮೆಗೊಂಡರು. ಒಬ್ಬರಮುಖ ಒಬ್ಬರು ನೋಡಿಕೊಂಡರು. ಆ ಪ್ರಮುಖರಲ್ಲಿ ವೃದ್ಧನಾದ ಉದ್ಯೋಗಿಯೊಬ್ಬನು ಎದ್ದು ನಿಂತು "ರಾಜನೇ, ನಮಗಾಗಿರುವ ಚಿಂತೆಯನ್ನು ಬಾಯಿಮಾತಿನಿಂದ ಹೇಳಲು ಸಾಧ್ಯವಿಲ್ಲ. ಹೆತ್ತ ತಂದೆಯಂತಹ ಕೃಪಾಸಿಂಹ ರಾಜರು ಮೃತರಾದರೂ, ಈ ಮಗುವಾದರೂ ಇರುವನಲ್ಲಾ ಎಂದು ಸಂತೋಷಪಡಲು ಸಾಧ್ಯವಿಲ್ಲವಾಗಿದೆ. ಇಂತಹ ಪರಿಸ್ಥಿತಿಯಲ್ಲಿ ನೀವೂ ಸಹ ವಿರಕ್ತರಾದರೆ ರಾಜಕುಮಾರನ ಗತಿ ಏನಾಗಬೇಕು? ಯಾವ ರೀತಿ ನೋಡಿದರೂ ರಾಜನ ಅನಂತರ ನೀವೇ ಅರ್ಹರು. ನಿಮಗಿಂತಲೂ ಈ ಅನಾಥ ಹುಡುಗನಿಗೆ ಪೋಷಕರು ಯಾರು? ನೀವೇ ಆ ಹಸುಳೆಯನ್ನು ನೋಡಿಕೊಳ್ಳಬೇಕು. ನಮ್ಮ ಪ್ರಾರ್ಥನೆಯನ್ನು ಮನ್ನಿಸಿ, ವಿರಕ್ತಿಭಾವವನ್ನು ಬಿಟ್ಟು, ಮಗುವಿಗೆ ಪಟ್ಟಾಭಿಷೇಕ ಮಾಡಿ, ನೀವು ರಾಜ್ಯವನ್ನು ಆತನ ಹೆಸರಿನಲ್ಲಿ ಆಳಿ. ಈ ರೀತಿ ಮಾಡುವುದರಿಂದ ಅತ್ತಕಡೆ ರಾಜನ ಆತ್ಮಕ್ಕೂ ಶಾಂತಿಯುಂಟಾಗುತ್ತದೆ" ಎಂದು ವಿನಯಪೂರ್ವಕವಾಗಿ ಬಿನ್ನವಿಸಿಕೊಂಡ.

ದರ್ಬಾರಿನಲ್ಲಿ ನೆರೆದಿದ್ದವರೆಲ್ಲಾ ಒಟ್ಟಾಗಿ ಎದ್ದುನಿಂತು, ಒಮ್ಮತದಿಂದ "ಮಹಾರಾಜ,

ಆತನು ಹೇಳಿದ ಸಲಹೆ ತುಂಬಾ ಸೊಗುಸಾಗಿದೆ. ರಾಜಕುಮಾರನ ಹೆಸರಿನಲ್ಲಿ ತಾವು ರಾಜ್ಯವನ್ನು ಪಾಲಿಸುವುದು ನಮ್ಮೆಲ್ಲರಿಗೂ ಸಮ್ಮತ" ಎಂದರು.

ಎಲ್ಲರ ಅಭೀಷ್ಟದಂತೆ ಶಕ್ತಿಸಿಂಹನು ರಾಜ್ಯಭಾರವನ್ನು ವಹಿಸಿಕೊಂಡು ಆಳುತ್ತಿದ್ದನು. ಆತನ ಪಾಲನೆಯು ಎಲ್ಲರಿಗೂ ಒಪ್ಪಿತವಾಯಿತು. ಪ್ರತಿಯೊಂದು ವಿಷಯದಲ್ಲೂ ಮಂತ್ರಿ ಸಾಮಂತರ ಮತ್ತು ಪ್ರಮುಖ ಉದ್ಯೋಗಿಗಳ ಸಲಹೆ ಪಡೆದು ಮುಂದಿನ ಕೆಲಸಕ್ಕೆ ಕೈಹಾಕುವನು. ಸ್ವತಂತ್ರವಾಗಿ ಯಾವ ಕೆಲಸವನ್ನೂ ಮಾಡದೆ, ತಾನು ನಿಮಿತ್ತಮಾತ್ರನಂತೆ ರಾಜ್ಯಪರಿಪಾಲನೆ ಮಾಡುತ್ತಾ ಇದ್ದ. ಈ ಕಾರಣದಿಂದ ಎಲ್ಲರಿಗೂ ಶಕ್ತಿಸಿಂಹನಲ್ಲಿ ನಂಬಿಕೆ ಉಂಟಾಯಿತು. ಆತನು ಯಾವ ಕೆಲಸನ್ನು ಮಾಡಿದರೂ ಆ ಎಳೆಕಂದನ ಮೇಲ್ಮೆಗಾಗಿಯೇ ಮಾಡುವನೆಂಬ ವಿಶ್ವಾಸ ಬೆಳೆಯಿತು.

ರಾಜ್ಯಭಾರವಹಿಸಿದುದೇನೋ ಆಯಿತು. ಆದರೆ ಶಕ್ತಿಸಿಂಹನಿಗೆ ಆ ವೃದ್ಧಳ ವಿಷಯವಾಗಿ ಉಂಟಾಗಿದ್ದ ಆಂದೋಳನ ಮಾತ್ರ ತೊಲಗಲಿಲ್ಲ. ಯಾಕೆಂದರೆ ಆತನು ರಾಜ್ಯಭಾರವನ್ನು ವಹಿಸಿದ ದಿನದ ಮೊದಲುಗೊಂಡು ಒಂದು ದಿನವಾದರೂ ನಿಶ್ಚಿಂತೆಯಿಂದ ನಿದ್ದೆ ಮಾಡಲೇ ಆಗಲಿಲ್ಲ. ಎಡೆ ತಡೆಯಿಲ್ಲದ ದುಸ್ವಪ್ನಗಳು ಬರುತ್ತಿದ್ದುವು. ಒಂದೊಂದು ಸಾರಿ ಕನಸಿನಲ್ಲಿ ಆ ವೃದ್ಧಳು ಭಯಂಕರ




ರೂಪದಲ್ಲಿ ಕಾಣಿಸಿಕೊಂಡು ಹೆದರಿಕೆಯನ್ನುಂಟುಮಾಡುವಳು. ಈ ರೀತಿ ಅಡಿಗಡಿಗೆ ನಡೆಯುತ್ತಿದ್ದುದರಿಂದ ಶೀಘ್ರದಲ್ಲೇ ಆವೃದ್ಧಳು ಬರಬಹುದೆಂದೂ, ತನ್ನ ಗುಟ್ಟೆಲ್ಲಾ ಬಯಲಾಗುವುದೆಂದೂ ಶಕ್ತಿಸಿಂಹ ಭಯದಿಂದ ತಲ್ಲಣಿಸಿದ.

ಆತನು ಭಯಗೊಂಡಂತೆ ಆ ವೃದ್ಧಳು ಮತ್ತೆ ಅತ್ತಕಡೆ ಸುಳಿಯಲೇ ಇಲ್ಲ. ಯಥಾರ್ಥವು ಹೊರಬೀಳಲೂ ಇಲ್ಲ. ಆದರೂ ಶಕ್ತಿಸಿಂಹ ಯಾವುದಾದರೊಂದು ಉಪಾಯವನ್ನು ರಾತ್ರಿ ಹಗಲು ಯೋಚಿಸುತ್ತಲೇ ಇದ್ದ.

ಹೀಗೇ ಆಲೋಚಿಸುತ್ತಿರುವಲ್ಲಿ ಒಂದು ದಿನ ಶಕ್ತಿಸಿಂಹನಿಗೆ ಯೋಚನೆಯೊಂದು ಹೊಳೆಯಿತು. ತಕ್ಷಣ ಆಪ್ತ ಪ್ರಮುಖರನ್ನು ಆಸ್ಥಾನಕ್ಕೆ ಬರಮಾಡಿಕೊಂಡು ಈ ರೀತಿ



ಅದಕ್ಕೆ ಅವರಲ್ಲನೇಕರು ಏಕಕಂಠದಿಂದ "ಪ್ರಭುಗಳೇ, ನಮಗಿದೇ ಸುದಿನ. ಎಂತಹ ಶುಭ ವಾರ್ತೆಯನ್ನು ಕೇಳಿದೆವು! ನಮ್ಮ ಚಿರಂಜೀವಿಯು ಆರೋಗ್ಯ ಉತ್ತಮಗೊಳ್ಳು ವುದೇ ನಮಗೆಲ್ಲಾ ಬೇಕಾದುದು! ಇಂದೇ ಆ ಮಹಾನುಭಾವನ ಹತ್ತಿರ ಕಳುಹಿಸಿಕೊಡಿ" ಎಂದು ಆತನ ಸಲಹೆಗೆ ಅಂಗೀಕಾರ ಸೂಚಿ ಸಿದರು.

ಈ ಅಂಗೀಕಾರ ಪಡೆದು, ಶಕ್ತಿಸಿಂಹನು ಕಾವಲುಗಾರರನ್ನೂ, ದಾದಿಯನ್ನೂ ಜೊತೆ ಮಾಡಿ ಆ ಪರ್ವತದ ಗುಹೆಗೆ ಹೋಗಲು ಪ್ರಯಾಣಕ್ಕೆ ಸಿದ್ಧಮಾಡಿಸಿದ. ಹೊರಡುವ ಮುನ್ನ ಆ ಕಾವಲುಗಾರರಲ್ಲೊಬ್ಬ ಆಪ್ತನಿಗೆ ಏನೋ ರಹಸ್ಯ ಸಂಜ್ಞೆಯನ್ನು ಮಾಡಿದ.

ದೇವಸಿಂಹನನ್ನು ಎತ್ತಿಕೊಂಡು ದಾದಿ ಕಾವಲುಗಾರರು ಕೆಲ ದಿನಗಳಿಗೆಲ್ಲಾ ಗೊಂಡಾ ರಣ್ಯವನ್ನು ಸೇರಿದರು. ತುಂಬಾ ಆಯಾಸ ಗೊಂಡಿದ್ದರಾದುದರಿಂದ ಎಲ್ಲರೂಸೇರಿ ಒಂದು ಮರದ ನೆರಳಿನಲ್ಲಿ ವಿಶ್ರಮಿಸಿದರು. ದಾದಿ ಅಲ್ಲೇ ಹಾಸಿಗೆ ಹಾಸಿ, ಮಗುವನ್ನು ಮಲಗಿಸಿ ದಳು. ತಾನೂ ನಡುವಾಲಿಸಿದಳು. ಕೂಡಲೇ ಗಾಢನಿದ್ದೆ ಬಂತು.

ಈ ರೀತಿ ನಿದ್ದೆಯಲ್ಲಿ ಮುಳುಗಿದ ಅವರೆಲ್ಲ ರಿಗೂ ಬೆಳಗಾದಕೂಡಲೇ ಎಚ್ಚರವಾಯಿತು. ಎಲ್ಲರೂ ಸೇರಿ ದಾದಿಯನ್ನು ಎಬ್ಬಿಸಿದರು. ದಾದಿ ಮಗುವನ್ನು ಎಚ್ಚರಿಸಬೇಕೆಂದಿದ್ದಳು. ಆದರೆ ಆ ಮಗು ಕಣ್ಣು ಮುಚ್ಚಿಕೊಂಡು

ನುಡಿದ: "ಬುದ್ಧಿವಂತರಾದ ನಿಮಗೆ ಒಂದು ಅತ್ಯವಸರವಾದ ವಿಷಯ ಹೇಳಬೇಕಾಗಿದೆ. ನಮ್ಮ ರಾಜ್ಯದ ಈಶಾನ್ಯದಿಕ್ಕಿನಲ್ಲಿ ಸುಮಾರು ಹತ್ತುಯೋಜನಗಳ ದೂರದಲ್ಲಿ ಒಂದು ಪರ್ವತದಲ್ಲಿ ಗುಹೆಯೊಂದು ಇದೆಯಂತೆ. ಆ ಗುಹೆಯಲ್ಲಿ ಯೋಗಿಪುಂಗವನೊಬ್ಬನು ಇರುವನಂತೆ. ಆದರೆ ಆ ಸ್ಥಲವನ್ನು ಸೇರು ವದು ಸುಲಭಸಾಧ್ಯವಾದ ಮಾತಲ್ಲ. ಅಲ್ಲಿಗೆ ಹೋದರೂ ಆತನ ದರ್ಶನ ಲಭಿಸುವುದು ದುರ್ಲಭ. ಆದರೆ ಆ ಮಹಾನುಭಾವನ ದೃಷ್ಟಿ ಬಿತ್ತೋ, ಎಂತಹ ಕಠಿನವ್ಯಾಧಿಯೇ ಇರಲಿ ಗುಣವಾಗುವುದಂತೆ. ನೀವು ಅನುಮತಿ ಕೊಟ್ಟರೆ ನಮ್ಮ ಚಿರಂಜೀವಿಯನ್ನು ಅಲ್ಲಿ ಗೊಂದುಸಾರಿ ಕಳುಹಿಸಿಕೊಡುವ ಉದ್ದೇಶ ನನಗಿದೆ. ನಿಮ್ಮ ಅಭಿಪ್ರಾಯವೇನು"



ಸುಖನಿದ್ದೆಯಲ್ಲಿರುವುದನ್ನು ಕಂಡು ಈಗಲೇ ಏಕೆ ಎಬ್ಬಿಸಬೇಕೆಂದು ದಾದಿ ಸುಮ್ಮನಾದಳು. ಆದರೆ ಆ ಮಗು ಎಷ್ಟು ಹೊತ್ತಾದರೂ ಎಚ್ಚರಗೊಳ್ಳುವ ಸೂಚನೆ ಕಾಣಬರಲಿಲ್ಲ. ತಟ್ಟಿ ನೋಡಿದಳು. ಮಗು ಅಲುಗಾಡಲಿಲ್ಲ. ಕಂಗಾಲಾಗಿ ಕೂಗಿಕೊಂಡಳು ಆಕೆ. ಎಲ್ಲರೂ ಬಂದರು; ನೋಡಿದರು. ನೋಡಿ ನಿಶ್ಚೇಷ್ಟಿತ ರಾದರು.

ಮಲಗಿದ್ದ ಮಗು ಮಲಗಿದಂತೆಯೇ ಇದ್ದು ಬಿಟ್ಟು ಉಸಿರಾಡುತ್ತಿಲ್ಲ. ಇದೇನಿದು ಸೋಜಿಗ? ಯಾರಿಗೂ ಏನೂ ತೋರಲಿಲ್ಲ. ಬಿಕ್ಕಿಬಿಕ್ಕಿ ಅಳುತ್ತಾ ಅವರೆಲ್ಲರೂ ಹಿಂತಿರುಗಿ ಬಂದು ರಾಜನ ಪಾದಗಳ ಮುಂದೆ ವಿಷಯ ವನ್ನು ಅರುಹಿದರು. ರಾಜ ಆಶ್ಚರ್ಯಚಕಿತ ನಾದ. ಕ್ಷಣಮಾತ್ರದಲ್ಲಿ ಈ ಸುದ್ಧಿ ರಾಜ್ಯದ ಲ್ಲೆಲ್ಲಾ ಹರಡಿತು.

ಈ ವಿಧಿಯ ಆಟಕ್ಕೆ ರಾಜ್ಯದ ಪ್ರಜೆಗ ಳೆಲ್ಲರೂ ಬೆರಗಾದರು. ನಿರ್ದಿಷ್ಟವಾಗಿ ಹೀಗೇ ಎಂದು ಹೇಳಲಾರದೆ ತಲಾ ಒಂ ದೊಂದು ರೀತಿ ಆಡಿಕೊಳ್ಳುತ್ತಿದ್ದರು. ಈ ರಾಜ್ಯಕ್ಕೆ ಪೀಡೆ ಹಿಡಿದಿದೆ ಎಂದು ಕೆಲವರೂ, ಇದು ಆ ರಾಜವಂಶದ ಅವನತಿಗೆ ಸೂಚನೆ ಎಂದೂ, ಅನಾಥರಾಜ್ಯವೆಂಬ ಹೆಸರು ಅನ್ವರ್ಥ ನಾಮವಾಗಿ ಉಳಿದುಬಿಡಲೋಸಗವೇ ಹೀಗಾಗಿರಬಹುದೆಂದು ಮತ್ತೆ ಕೆಲವರೂ ಆಡಿ ಕೊಳ್ಳುತ್ತಿದ್ದರು.

ಹುಡುಗನ ಮರಣಸಮಾಚಾರ ಕೇಳಿ



ಶಕ್ತಿಸಿಂಹ ಬಹುವಾಗಿ ವಿಲಪಿಸಿದ. ಆತನ ದುಃಖವನ್ನು ಕಂಡವರು ಯಾರೂ ಈ ವಿಷಯ ದಲ್ಲಿ ಯಾವುದೇ ಒಂದುವಿಧವಾದ ಸಂಚು ನಡೆದಿರಬಹುದೆಂದು ಯೋಚಿಸಲೂ, ಅನು ಮಾನಪಡಲೂ ಅವಕಾಶವೇ ಇರಲಿಲ್ಲ.

ಆದರೊಂದುಮಾತು. ಹುಡುಗನ ಮರಣ ವಾರ್ತೆ ರಾಜ್ಯದಲ್ಲಿ ಎಲ್ಲರಿಗಿಂತಲೂ ಹೆಚ್ಚಾಗಿ ಶಕ್ತಿಸಿಂಹನನ್ನು ಆಶ್ಚರ್ಯದಲ್ಲಿಮುಳುಗಿಸಿತು. ಲೋಕರೂಢಿಯಂತೆ ಆತನು ದುಃಖವನ್ನು ತೋರ್ಪಡಿಸಿದನೇ ಹೊರತು, ಇಷ್ಟೊಂದು ಸುನಾಯಾಸವಾಗಿ ತನ್ನ ಅಭಿಲಾಷೆ ನೆರವೇ ರಿದುದು ಯಾವುದೋ ಒಂದು ಅದ್ಭುತ ಮಹಿಮೆಯಿಂದ ಆಯಿತೆಂದು ಎಣಿಸಿದ. ಆತ ಮನಸ್ಸಿನಲ್ಲಿ ಆನಂದಪಟ್ಟ. ಯಾವ ಹುಡುಗನು ತೊಲಗಿದರೆ ತಾನು ಏಕಚಕ್ರಾಧಿ




ಪತಿಯಾಗಿ ರಾಜ್ಯವನ್ನು ಆಳುತ್ತಾ ಸುಖದಿಂದ ಇರಬಹುದೆಂದು ನೆನೆಸಿದ್ದನೋ, ಆ ಮಗು ಮರಣಿಸಿನೆಂದ ಮೇಲೆ, ಇನ್ನು ಬೇಕಾದು ದಾದರೂ ಏನಿದೆ?

ಇನ್ನುಮುಂದೆ ತನ್ನಿಷ್ಟಬಂದಂತೆ ಇರಬಹುದು. ಆತನು ಸುಖದಲ್ಲಿ ಓಲಾಡುವಷ್ಟರಲ್ಲಿ, ಇದ್ದಕ್ಕಿದ್ದಂತೆಯೇ ಕೆಲವು ವಿಚಿತ್ರ ಸಂಘಟನೆಗಳು ನಡೆದವು. ತನಗೆ ಬದಲಾಗಿ, ಸಿಂಹಾಸನವನ್ನು ಹತ್ತಿಸಿ ಪಟ್ಟಾಭಿಷೇಕ ಮಾಡಿಸಬೇಕೆಂದಿದ್ದ ಆತನ ಹಿರಿಯಮಗ ಆಕಸ್ಮಿಕವಾಗಿ ಒಂದು ಅವಾಂತರಕ್ಕೆ ಗುರಿಯಾದ. ನಾಳೆ ಪಟ್ಟಾಭಿಷೇಕವೆಂದಾಗ, ಆ ಹುಡುಗ ದುರದೃಷ್ಟವಶಾತ್ ಮಹಡಿಯ ಮೇಲಿಂದ ಜಾರಿ, ಬಲವಾದ ಪೆಟ್ಟುತಗಲಿ ಕುಂಟನಾದ. ಇದು ನಡೆದ ಕೆಲವು ದಿನಗಳಲ್ಲೇ ಶಕ್ತಿಸಿಂಹನ ಆರನೇ ಮತ್ತು ಕೊನೆಯವನೂ, ತಾಯಿಗೆ ಮಮತೆಯ ಮಗನೂ ಆಗಿದ್ದವನಿಗೆ ತುಂಬಾ ಕಾಯಿಲೆ ಬಂದು ಹಾಗೂ ಹೀಗೂ ಚೇತರಿಸಿಕೊಂಡಿದ್ದ. ಈ ಎರಡು ಏಟುಗಳನ್ನು ಸುಧಾರಿಸಿಕೊಳ್ಳುವಷ್ಟರಲ್ಲಿ ಅಳಿಯನಿಗೆ ಮತಿಕೆಟ್ಟು, ದೇಶಾಂತರ ಓಡಿಬಿಟ್ಟ. ಏಕಮಾತ್ರ ಪುತ್ರಿಯ ಸಂಸಾರ ಮಣ್ಣುಪಾಲಾಯಿತು. ಈ ರೀತಿಯಾಗಿ ಆ ಕುಟುಂಬದಲ್ಲಿ ಯಾರೋ ಒಬ್ಬರು ಆಪತ್ತಿನಲ್ಲಿ ಸಿಲುಕುತ್ತಿದ್ದರು; ಯಾರೂ ಸುಖಪಡುವ ಭಾಗ್ಯ ಕೇಳಿಕೊಂಡು ಬಂದಿರಲಿಲ್ಲ.

ಶಕ್ತಿಸಿಂಹನೇನೋ ಕೆಚ್ಚೆದೆಯುಳ್ಳವನೇ ಇರಬಹುದು. ಆದರೂ ತನ್ನ ಕಣ್ಣೆದುರಾಗಿ, ತನ್ನ ಕುಟುಂಬ ಈರೀತಿ ಕಷ್ಟಗಳ ಪಾಲಾಗುತ್ತಿರುವುದನ್ನು ಕಂಡು ಸಹಿಸಲಾರದೆ ಹೋದ. ಎಷ್ಟೇ ಚಿಕಿತ್ಸೆ ಮಾಡಿಸಿದರೂ ಮಕ್ಕಳ ರೋಗ ಗುಣಹೊಂದಲಿಲ್ಲ. ಬಾಲಾರಿಷ್ಟಗಳು ತೊಲಗಲು ಎಷ್ಟೋ ಶಾಂತಿಗಳನ್ನು ಮಾಡಿಸಿದ. ಆದರೆ ಆತನ ಮನಸ್ಸಿಗೆ ಶಾಂತಿ ಬರಲಿಲ್ಲ. ಒಳ್ಳೆಕಾಲ ಬಂದಿತೆಂದು ಸಂಭ್ರಮಗೊಳ್ಳುತ್ತಿರುವಲ್ಲಿ, ಕಥೆ ಈ ರೀತಿ ಅಡ್ಡದಾರಿ ಹಿಡಿದಿದೆ!

ಆತನ ಮನಸ್ಸು ವಿಕಲಗೊಂಡಿತು. ತಾನೊಂದು ನೆನೆಸಿದರೆ ದೈವವೊಂದು ಭಾವಿಸುವುದು ಎಂಬ ಹಿರಿಯರ ವಾಕ್ಯವನ್ನು ಜ್ಞಾಪಕಕ್ಕೆ ತಂದುಕೊಂಡ. ರಾಜ್ಯದಲ್ಲೆ ಹೆಸರುವಾಸಿಯಾದಂತಹ ಜೋತಿಷ್ಕರನ್ನೆಲ್ಲಾ



ಕರೆಯಿಸಿ, "ಮುಂದಿನ ಸ್ಥಿತಿಗತಿಗಳು ಹೇಗೆ?" ಎಂದು ಪ್ರಶ್ನೆಮಾಡಿ, ತನ್ನ ಕುಟುಂಬ ಜಾತಕಗಳನ್ನೆಲ್ಲಾ ಅವರಮುಂದೆ ಇಟ್ಟ.

ದೈವಜ್ಞರು ಆ ಜಾತಕಗಳನ್ನು ಜಾಗರೂಕತೆಯಿಂದ ಪರಿಶೀಲಿಸಿ ನೋಡಿದರು. ಅಂಕಿಗಳಮೇಲೆ ಅಂಕಿಗಳು ಹಾಕಿ ಗುಣಕಾರ ಮಾಡಿದರು; ಭಾಗಾಕಾರ ಮಾಡಿದರು. ಏನೇ ಮಾಡಿ ನೋಡಿದರೂ ಜಾತಕಗಳೆಲ್ಲಾ ಕತ್ತಲುಮಯವಾಗಿದೆ! ಒಂದೇ ಒಂದು ಶುಭಸೂಚನೆಯಾದರೂ ಕಾಣಬರಲಿಲ್ಲ. ಒಂದು ಮಾತಿನಲ್ಲಿ ಹೇಳಿ ಮುಗಿಸಬೇಕೆಂದರೆ, ಇನ್ನು ಕೆಲವು ದಿನಗಳಲ್ಲೇ ಶಕ್ತಿಸಿಂಹನ ಕುಟುಂಬವು ನಿರ್ನಾಮವಾಗುವುದೆಂದು ಸ್ಪಷ್ಟವಾಗಿ ಕಾಣಿಸಿತು.

ಅನುಕೂಲವಾದ ವಾರ್ತೆಯಾಗಿದ್ದರೆ ಒಂದಕ್ಕೆ ನಾಲ್ಕು ಸೇರಿಸಿ ಉತ್ಸಾಹದಿಂದ ಹೇಳಬಹುದಾಗಿತ್ತು. ಈಗಿರುವ ಪರಿಸ್ಥಿತಿಗಳಲ್ಲಿ ವಿಚಾರ ತಿಳಿಸುವುದಾದರೂ ಹೇಗೆ? ಆದರೂ ಜಾತಕವು ಎಷ್ಟೇ ಕೆಟ್ಟದಾಗಿರಲಿ, ಅದು ಉತ್ತಮವಾಗಿದೆಯೆಂದು ಹೇಳುವುದು ತಮ್ಮ ವಿಧಿ. ಜೋತಿಷ್ಕರೆಲ್ಲಾ ಒಂದೆಡೆ ಸೇರಿ ಯೋಚಿಸಿ, ಜಾತಕದಲ್ಲಿ ಕಾಣಬರುವ ಪ್ರತಿಕೂಲಗಳನ್ನೆಲ್ಲಾ ಅನುಕೂಲವಾಗಿರುವಂತೆ ಬದಲಾಯಿಸಿ, ರಾಜನಿಗೆ ಸರಿಬೀಳುವ ಸಿಹಿ ಮಾತುಗಳಿಂದ ಈರೀತಿ ಬಿನ್ನವಿಸಿಕೊಂಡರು.

"ಮಹಾರಾಜರೇ, ಶೀಘ್ರದಲ್ಲೇ ಶನಿ ತೊಲಗುವದು. ಕೂಡಲೇ ಆಳುವ ಮಹಾಸ್ವಾಮಿಯವರಿಗೆ ಒಂದು ಅಪೂರ್ವವಾದ ಯೋಗವಿದೆ. ಮಹಾಸ್ವಾಮಿಯವರು ಮನಸ್ಸಿನಲ್ಲಿ ನೆನೆಸಿದ ಕಾರ್ಯಗಳೇ ಅಲ್ಲದೆ, ನೆನಸದ ಕಾರ್ಯಗಳೂ ಎಷ್ಟೋ ಜಯಪ್ರದವಾಗಿ ನಡೆಯುವುದು. ಗ್ರಹಗಳ ಹೊಂದಾಣಿಕೆ ತುಂಬಾ ಅನುಕೂಲವಾಗಿದೆ. ನಿಜ ನುಡಿಯಬೇಕೆಂದರೆ ನಾವು ಇಂತಹ ಜಾತಕವನ್ನು ಇದುವರೆವಿಗೆ ನೋಡಿಯೇ ಇಲ್ಲ" ಎಂದು ಹೊಗಳಲಾರಂಭಿಸಿದರು. ಅದನ್ನು ಕೇಳಿ ಶಕ್ತಿಸಿಂಹ ಆನಂದಪರವಶನಾದ. ಜೋತಿಷ್ಕರಿಗೆ ಭಾರಿಭಾರಿ ಬಹುಮಾನಗಳನ್ನು ಕೊಟ್ಟು ಸತ್ಕರಿಸಿ ಕಳುಹಿಸಿದ. ಅವರು ಹೇಳಿದ ಮಹಾಯೋಗ ಯಾವಾಗ ಒದಗುವದೋ ಎಂದು ಎದುರು ನೋಡುತ್ತಿದ್ದ.

ಇಷ್ಟೊಂದು ವಿಚಿತ್ರಗಳು ನಡೆಯುತ್ತಿದ್ದರೂ ಇದ್ದೆಲ್ಲಾ ವಿಧಿಯ ಆಟವೆಂದು ಮಂತ್ರಿ ಮಾತ್ರ ನಂಬಿರಲಿಲ್ಲ. ಇದರಲ್ಲಿ ಏನೋ ಕೃತಿಮ ನಡೆದಿರಬೇಕೆಂದು ಒಳ ಸಂದೇಹ ಆತನನ್ನು ಪೀಡಿಸುತಿತ್ತು. ಆದರೆ ಯಾವೊಂದು ಆಧಾರವೂ ಇಲ್ಲದೆ ಹೇಗೆ ಕೈಹಾಕುವುದು? ಅಷ್ಟೇಅಲ್ಲದೆ ಸ್ವಯಂ ರಾಜಸಾದ ಶಕ್ತಿಸಿಂಹನ ಮೇಲೆ ಏಕಾಏಕಿ ಅನುಮಾನಪಡುವುದೆಂದರೆ ಕಷ್ಟವನ್ನು ಕೋರಿ ತಂದುಕೊಂಡಂತೆಯೇ ಸರಿ. ರಾಜ್ಯದಲ್ಲಿ ಪ್ರಜೆಗಳೂ, ಪ್ರಜೆಗಳನ್ನು ಪಾಲಿಸುತಿದ್ದ ಪ್ರಮುಖರೂ ಶಕ್ತಿಸಿಂಹನ ಮಾತುಗಳನ್ನು ಸಂಪೂರ್ಣವಾಗಿ ನಂಬಿ ಶಿರಸಾವಹಿಸಿ ನಡೆಯುತ್ತಿದ್ದರು. ಅಂತಹ ಪರಿಸ್ಥಿತಿಯಲ್ಲಿ 'ಅದಲ್ಲಾ ಇದು' ಎಂದು ಮಂತ್ರಿಯಾದವನೊಬ್ಬನು ಮಾತ್ರ ಹೇಳಿದರೆ ಯಾರು ಕಿವಿಗೆ ಹಾಕಿಕೊಳ್ಳುವರು? ಆದುದರಿಂದ ಕೃತಿಮವನ್ನು ರುಜುವಾತು ಮಾಡಿ ತೋರಿಸುವ ಆಧಾರಗಳು ತನಗೆ ಸಿಗುವವರೆವಿಗೂ ಸುಮ್ಮನಿರದೆ ಗತ್ಯಂತರವಿಲ್ಲ. ಆ ವೃದ್ಧಳು ಯಾರೋ ಈ ಸಮಯದಲ್ಲಿ ಬಂದರೆ ಸೊಗುಸಾಗಿರುತ್ತದೆ. ಆದರೆ ಆಕೆ ಬರಲಿಲ್ಲ. ಆಕೆ ಬರುವವರೆವಿಗೂ ದಾದಿ ಮತ್ತು ಆಸ್ಥಾನ ವೈದ್ಯರನ್ನು—ಅವರು ದೋಷಿಗಳೇ ಅಲ್ಲವೇ ಎಂಬ ವಿಷಯವನ್ನು ಒತ್ತಟ್ಟಿಗಿಟ್ಟು—ಸೆರೆಮನೆಯಲ್ಲಿಟ್ಟೇ ತೀರಬೇಕು. ಬೇರೆ ಮಾರ್ಗವೇ ಇಲ್ಲ.

ತನಗೆ ಶನಿಕಾಟ ತೊಲಗಿ, ಸುದಿನಗಳು ಯಾವಾಗ ಬರುವುದೋ ಎಂದು ಶಕ್ತಿಸಿಂಹ ಒಂದು ಕಡೆ ಕಾದಿದ್ದಾನೆ. ಮತ್ತೊಂದುಕಡೆ ಮಂತ್ರಿ ಎಂದು ಆ ವೃದ್ಧಳು ಬರುವಳೋ, ಯಾವಾಗ ಸತ್ಯವು ಹೊರಬಿದ್ದು, ತನ್ನ ಅನುಮಾನ ಬಲಗೊಳ್ಳುವುದೋ ಎಂದು ಹಾತೊರೆಯುತ್ತ ಕಾದಿದ್ದಾನೆ.

ಮಂತ್ರಿ ಆ ವೃದ್ಧಳ ಸುಳಿವನ್ನು ಹೇಗಾದರೂ ಮಾಡಿ ತಿಳಿದುಕೊಂಡು ಬರುವಂತೆ ನಂಬಿಕೆಯುಳ್ಳ ಭಟರನ್ನು ರಾಜ್ಯದ ನಾಲ್ಕು ಮೂಲೆಗಳಿಗೂ ಕಳುಹಿಸಿದ. ಮಂತ್ರಿಯ ಆಜ್ಞೆಯಂತೆ ಅವರು ಛಲದಿಂದ ರಾಜ್ಯವನ್ನೆಲ್ಲಾ ಶೋಧಿಸುತ್ತಿದ್ದರು.

—(ಮುಂದುವರಿಯುತ್ತೆ)





# ತಿಮ್ಮಯ್ಯನ ಬುದ್ಧಿವಂತಿಕೆ

ಒಂದೂರಿನಲ್ಲಿ ತಿಮ್ಮಯ್ಯ ಅಂತ ಒಬ್ಬ ರೈತನಿದ್ದ. ಅವನೇನೂ ಅಷ್ಟು ಬುದ್ಧಿವಂತನಲ್ಲ. ಒಂದು ವಿಚಿತ್ರವೇನೆಂದರೆ "ನಾನು ತುಂಬಾ ಬುದ್ಧಿಶಾಲಿ, ತಿಳುವಳಿಕೆಯುಳ್ಳವನು" ಎಂದು ಆತ ಅಭಿಮಾನಪಟ್ಟುಕೊಳ್ಳುತ್ತಿದ್ದ. ತಿಮ್ಮಯ್ಯ ಬೆಳೆದ ಧಾನ್ಯವನ್ನೆಲ್ಲಾ ಹೊಲದಲ್ಲೇ ಒಂದು ದೊಡ್ಡ ಮೆದೆ ಕಟ್ಟಿಸಿ ಬಚ್ಚಿಟ್ಟ. ಧಾನ್ಯವನ್ನು ಯಾರೂ ಹೊತ್ತುಕೊಂಡು ಹೋಗದಂತೆ ರಾತ್ರಿವೇಳೆಯಲ್ಲಿ ಅಲ್ಲೇ ಮಲಗಿಕೊಳ್ಳುತ್ತಿದ್ದ.

ಆ ಊರಿನಲ್ಲಿ ಗೋವಿಂದ ಎಂಬ ಕಳ್ಳನೊಬ್ಬನಿದ್ದ. ಅವನು ದವಸ ಧಾನ್ಯವನ್ನು ಮಾತ್ರ ತುಡುಗು ಮಾಡುತ್ತಿದ್ದ. ದವಸ ಧಾನ್ಯವನ್ನು ಹೊರತು ಮತ್ತೆ ಯಾವುದನ್ನೂ ಮುಟ್ಟುತ್ತಲೂ ಇರಲಿಲ್ಲ. ಮೆದೆಯನ್ನು ಕತ್ತರಿಸಲು ಒಂದು ಕುಡುಗೋಲು, ಅನಂತರ ತೋಡಿದ ಧಾನ್ಯವನ್ನು ಎತ್ತಿಕೊಂಡು ಹೋಗಲು ಒಂದು ಗೋಣಿಚೀಲ ತೆಗೆದುಕೊಂಡು ಅರ್ಧರಾತ್ರಿ ವೇಳೆಯಲ್ಲೆ ಕಳ್ಳತನ ಮಾಡಲು ಹೊರಡುತ್ತಿದ್ದ. ಅವನೆಷ್ಟೋ ಪೆಟ್ಟಿಗೆಗಳನ್ನು ಕತ್ತರಿಸಿ ಬೇಕಾದಷ್ಟು ಸಾರಿ ದವಸ ಧಾನ್ಯಗಳನ್ನು ಹೊತ್ತುಕೊಂಡು ಹೋಗಿದ್ದ. ಆದರೆ ಎಂದೂ ಸಿಕ್ಕಿಬಿದ್ದಿರಲಿಲ್ಲ. ತಿಮ್ಮಯ್ಯ ಕಟ್ಟಿಸಿದ ಮೆದೆಯನ್ನು ನೋಡಿ ಹೇಗಾದರೂ ಆ ರಾತ್ರಿ ಅದಕ್ಕೆ ಕೈಹಾಕಬೇಕೆಂದು ಗೋವಿಂದನಿಗೆ ಅನ್ನಿಸಿತು.

ಅರ್ಧರಾತ್ರಿವೇಳೆ. ಎಲ್ಲರೂ ಗಾಢ ನಿದ್ದೆಯಲ್ಲಿದ್ದಾರೆ. ಆ ಸಮಯದಲ್ಲಿ ಗೋವಿಂದ ಕುಡುಗೋಲು, ಚೀಲ ತೆಗೆದುಕೊಂಡು ಸಿದ್ಧನಾಗಿ, ಶಬ್ದವಾಗದಂತೆ ಮೆದೆ ಕೊಯ್ದು, ತಾನು ಹೊರಲಾಗುವಷ್ಟೂ ಧಾನ್ಯವನ್ನು ಚೀಲದಲ್ಲಿ ತುಂಬಿ, ಭುಜದ ಮೇಲೇರಿಸಿಕೊಂಡು ಹೊರಡಲು ಸಿದ್ಧನಾದ.

ಹಗಲೆಲ್ಲಾ ಕಷ್ಟಪಟ್ಟು ಕೆಲಸಮಾಡಿದ ತಿಮ್ಮಯ್ಯ ಮೈಮರೆತು ಗೊರಕೆ ಹೊಡಿಯುತ್ತ ನಿದ್ದೆಮಾಡುತ್ತಿದ್ದ. ಆತನಿಗೆ ಎಚ್ಚರವಾಗುವ ಪ್ರಶ್ನೆಯೇ ಇರಲಿಲ್ಲ, ಆದರೆ ಅದೇ ಸಮಯಕ್ಕೆ ಸರಿಯಾಗಿ ಆತನ ಕಿವಿಯಲ್ಲಿ ಯಾವುದೋ ಒಂದು ಹುಳಹೊಕ್ಕು ತೊಂದರೆ ಕೊಡಲು ಪ್ರಾರಂಭಿಸಿತು. ಆದರಿಂದಾಗಿ

ಪಿ. ವಿ. ರಾಮಚಂದ್ರಮೂರ್ತಿ




ಆತನಿಗೆ ತಟಕ್ಕನೆ ಎಚ್ಚರವಾಯಿತು. ಚೀಲ ಹೊತ್ತುಕೊಂಡು ಹೋಗುತ್ತಿದ್ದ ಗೋವಿಂದ ಸ್ಪಷ್ಟವಾಗಿ ಕಾಣಿಸಿದ.

ತಿಮ್ಮಯ್ಯ ಹಠಾತ್ತನೆ ಎದ್ದು ಅವನನ್ನು ಹಿಡಿದುಕೊಂಡುಬಿಟ್ಟ. ಬೇರೊಬ್ಬರಾಗಿದ್ದರೆ ಗೋವಿಂದನಿಗೆ ನಾಲ್ಕು ಏಟುಕೊಟ್ಟು ಕಳು ಹಿಸಿ ಬಿಡುತ್ತಿದ್ದರು. ಬಲವಾದ ಆಸಾಮಿ, ಗೋವಿಂದನನ್ನು ಹೊಡೆಯಲು ಮನಸ್ಸು ಮಾಡಿದ್ದರೆ ಮೂಳೆ ಪುಡಿಪುಡಿಯಾಗುವಂತೆ ಮಾಡಿಬಿಡುತ್ತಿದ್ದ.

ಆದರೆ ತಿಮ್ಮಯ್ಯ ಆರೀತಿ ಮಾಡಲಿಲ್ಲ. ಕಾರಣವೇನೆಂದರೆ ಆತನಿಗೆ ತುಸ 'ಲಾ' ವಿಚಾರ ತಿಳಿದಿತ್ತು. ಯಾವ ತಪ್ಪಿತಸ್ಥನನ್ನೇ ಆಗಲೀ, ಸರಕಾರವು ಶಿಕ್ಷಿಸಬೇಕೇ ಹೊರತು ಯಾರೆಂದರವರು ಶಿಕ್ಷಿಸಕೂಡದೆಂದು ಯಾವನೋ ಪ್ಲೀಡರ್ ಪರೀಕ್ಷೆಗೆ ಓದುತ್ತಿದ್ದ ದೊಡ್ಡಮನುಷ್ಯ ಹೇಳಿದುದನ್ನು ತಿಮ್ಮಯ್ಯ ಕೇಳಿದ್ದ.

ಅಷ್ಟೇ ಅಲ್ಲ. ಕಳವು ಮಾಲಿನೊಂದಿಗೆ ಕಳ್ಳ ಸಿಕ್ಕಿಬಿದ್ದರೆ ಅವನ ಮೇಲಿನ ತಪ್ಪು ಸುಲಭ ವಾಗಿ ರುಜುವಾತು ಆಗುವುದೆಂದೂ, ಇಲ್ಲದಿದ್ದ ಪಕ್ಷಕ್ಕೆ ರುಜುವಾತು ಮಾಡುವುದು ಕಷ್ಟ ವೆಂದೂ ಆತನಿಗೆ ತಿಳಿದಿತ್ತು. ಗೋವಿಂದ ಕಳವು ಮಾಲಿನೊಂದಿಗೆ ಸಿಕ್ಕಿದನಾದುದರಿಂದ ಅವನನ್ನು ಮಾಲಿನೊಂದಿಗೆ ಮುನಸೀಫರ ಹತ್ತಿರ ಹಾಜರು ಪಡಿಸಿದರೆ ಉಚಿತ ಕ್ರಮ ತೆಗೆದು ಕೊಳ್ಳುವರೆಂಬ ಉದ್ದೇಶದಿಂದ, ತಿಮ್ಮಯ್ಯ ಗೋವಿಂದನನ್ನು ಒಂದು ಮಾತಾ ದರೂ ಆಡಿಸಲಿಲ್ಲ. ಅವನೊಂದಿಗೆ "ಎಲ್ಲಿ, ಮೂಟೆ ತೆಗೆದುಕೋ, ಮುನಸೀಫರ ಹತ್ತಿರ ನಡೆ" ಎಂದು ಮಾತ್ರ ಹೇಳಿದ.

ಆಂ ಊಂ ಅನ್ನದೆ ಗೋವಿಂದ ಚೀಲ ಎತ್ತಿ ಕೊಂಡು ನಡೆದ. ತಿಮಯ್ಯ ಅವನನ್ನು ಹಿಂಬಾ ಲಿಸಿದ.

ಗೋವಿಂದ ತಿಮ್ಮಯ್ಯನಷ್ಟು ಬಲಶಾಲಿ ಯಲ್ಲದಿದ್ದರೂ, ಯುಕ್ತಿವಂತ. ತಿಮ್ಮಯ್ಯ ಬೆಪ್ಪನೆಂಬ ವಿಷಯ ಅವನಿಗೂ ತಿಳಿದಿದೆ. ಹೇಗಾದರೂ ಅವನಿಗೆ ಟೋಪಿ ಹಾಕಿ, ತಪ್ಪಿಸಿ ಕೊಳ್ಳಬೇಕೆಂದು ಆಲೋಚಿಸುತ್ತಿದ್ದ.

ಆಲೋಚಿಸಿ, ಆಲೋಚಿಸಿ ಕೊನೆಗೆ ಈ ರೀತಿ ನುಡಿದ: "ಸ್ವಾಮೀ—ನನ್ನನ್ನು ತಾವು ಮುನಸೀಫರ ಹತ್ತಿರ ಏಕೆ ಕರೆದುಕೊಂಡು

ಹೋಗುತ್ತಿರುವಿರಿ?" ಎಂದು ಏನೂ ಅರಿಯ ಹವನಂತೆ ಕೇಳಿದ.

ಅದಕ್ಕೆ ತಿಮ್ಮಯ್ಯ "ನೀನೊಬ್ಬ ಬೆಪ್ಪುತಕ್ಕಡಿ ಹುಗಕಣೋ. ಈ ಕಳವು ಮಾಲಿನೊಂದಿಗೆ ನಿನ್ನನ್ನು ಮುನಸೀಫರಿಗೆ ಒಪ್ಪಿಸಿದರೆ ಆತನು ಕಾನೂನು ಪ್ರಕಾರ ಶಿಕ್ಷೆ ವಿಧಿಸುವನು. ಇಷ್ಟು ಮಾತ್ರ ತಿಳಿಯದೆ?" ಎಂದ, ತನಗೆಲ್ಲಾ ತಿಳಿದಿರುವ ಹಾಗೆ.

ಈ ಮಾತು ಕೇಳಿ ಗೋವಿಂದ "ಸ್ವಾಮಿ, ಇದು ಕಳುವು ಮಾಲೆಂದು ಮುನಸೀಫರಿಗೆ ಹೇಗೆ ರುಜುವಾತು ಮಾಡಬಲ್ಲಿರಿ? ಈ ಮೂಟೆ ನನ್ನ ಕೈಯಲ್ಲಿ ಕೂಲಿಗೆ ಹಾಕುತ್ತಿದ್ದಾರೆ. ನಾನು ಕಳ್ಳತನ ಮಾಡಲಿಲ್ಲ" ಎಂದು ನಾನು ಅವರೊಂದಿಗೆ ಹೇಳುವೆನೆಂದು ಭಾವಿಸಿ. ಆಗಾತನು ನನ್ನನ್ನು ಬಿಟ್ಟುಬಿಡುವನಷ್ಟೆ. ಹಾಗಿರುವಾಗ ನೀವೇನು ಮಾಡಬಲ್ಲಿರಿ?" ಎಂದ.

ಈ ಮಾತು ಕೇಳಿ ತಿಮ್ಮಯ್ಯನಿಗೆ ನಿಜವೆನಿಸಿತು. "ಲೋ, ಹಾಗಾದರೆ ಇದು ಕಳುವು ಮಾಲೆಂದು ಹೇಗೆ ತಿಳಿಸುವುದು" ಎಂದು ಗೋವಿಂದನನ್ನೇ ಸಲಹೆ ಕೇಳಿದ.

ಅದಕ್ಕೆ ಗೋವಿಂದ "ಹೇಗೇನು ಬಂತು ಸ್ವಾಮಿ. ನನ್ನ ಕುಡುಗೋಲನ್ನು ಮುನಸೀಫರಿಗೆ ತೋರಿಸಿ, 'ಇವನು ಇದರೊಂದಿಗೆ ಮೆದೆ ಕತ್ತರಿಸಿದ' ಎಂದು ಹೇಳಿ" ಎಂದ.

ಅವನ ಆಲೋಚನೆಗೆ ಮೆಚ್ಚಿಕೊಂಡು "ಎಲ್ಲಿ, ನಿನ್ನ ಕುಡುಗೋಲು?" ಎಂದ ತಿಮ್ಮಯ್ಯ. ಆಗ ಗೋವಿಂದ "ಅಯ್ಯೋ, ನನ್ನ



ಕುಡುಗೋಲನ್ನು ಆ ಜಾಗದಲ್ಲೇ ಮರೆತು ಬಂದುಬಿಟ್ಟೆ "ಇಲ್ಲೇ ಇರಿ. ತಕ್ಷಣ ಓಡಿ ಹೋಗಿ ತರುತ್ತೇನೆ" ಎಂದು ಚೀಲವನ್ನು ಅಲ್ಲೇ ಹಾಕಿಬಿಟ್ಟು ಓಡಿದ.

ಆಗ ಬರುತ್ತಾನೆ, ಈಗ ಬರುತ್ತಾನೆ ಎಂದು ತಿಮ್ಮಯ್ಯ ಬೆಳಗಾಗುವವರೆವಿಗೂ ಗೋವಿಂದನಿಗಾಗಿ ಎದುರು ನೋಡುತ್ತಾ ಕುಳಿತಿದ್ದ. ಎಲ್ಲಾದರೂ ಓಡಿ ಹೋದ ಕಳ್ಳ ಹಿಂತಿರುಗಿ ಬರುವನೇ? ಅವನು ಬರಲೇ ಇಲ್ಲ. ರೈತನಿಗೆ ಕೋಪಬಂತು. ಆ ಮೂಟೆಯನ್ನು ಮುನಸೀಫರಿಗೆ ತೋರಿಸಿ, ನಡೆದ ವಿಷಯವನ್ನೆಲ್ಲಾ ಹೇಳುವ ಎಂದಿದ್ದ. ಆದರೆ 'ಲಾ' ತಿಳಿದಿದ್ದವನಲ್ಲವೇ ನಮ್ಮ ತಿಮ್ಮಯ್ಯ.? ಕಳ್ಳನಿಲ್ಲದೆ ಕಳ್ಳ ಮಾಲು ರುಜುವಾತು ಮಾಡುವುದು ಹೇಗೆ? ಆದುದರಿಂದ ಆ ಪ್ರಯತ್ನಬಿಟ್ಟು, ತನ್ನ ಚೀಲ

ವನ್ನೂ ತಲೆಮೇಲಿಟ್ಟುಕೊಂಡು ದೇವರೇ ಎಂದು ಮನೆಕಡೆ ಹೆಜ್ಜೆ ಹಾಕಿದ.

ಆರು ತಿಂಗಳುಗಳು ಕಳೆದವು. ತಿಮ್ಮಯ್ಯ ಯಾವುದೋ ಊರಿಗೆ ಹೋಗಿರುವನೆಂದೂ, ಆತನು ಬರಲು ಇನ್ನೂ ಹತ್ತು ದಿನಗಳಾಗ ಬಹುದೆಂದೂ ಗೋವಿಂದನಿಗೆ ಸಮಾಚಾರ ತಿಳಿಯಿತು. ಒಂದು ದಿನ ರಾತ್ರಿ ಆತನ ಹೊಲವಲ್ಲಿ ಮೆದೆ ಕುಯ್ದು ಧಾನ್ಯವನ್ನು ಎತ್ತಿ ಕೊಳ್ಳುತ್ತಿದ್ದ. ಆದರೆ ಅವನ ಗ್ರಹಚಾರ ಕಡಿಮೆ ಯಾಗಿ, ತಿಮ್ಮಯ್ಯ ಅವಧಿಗೆ ಮೊದಲೇ ಬಂದು ಬಿಟ್ಟಿದ್ದ. ಮನೆಗೆ ಬಂದ ಕೂಡಲೇ ಆತುರದಿಂದ ಹೊಲದ ಹತ್ತಿರ ಹೋಗಲು ಧಾನ್ಯವನ್ನು ಚೀಲದಲ್ಲಿ ತುಂಬುತ್ತಿದ್ದ ಗೋವಿಂದ ಕಾಣಿಸಿದ.

"ಎಲೆ ಧೂರ್ತ, ಮತ್ತೆ ಬಂದೆಯಾ?" ಎಂದು ಅವನನ್ನು ಹಿಡಿದು ಹಿಂದಿನ ಸಲ ದಂತೆಯೇ ಮೂಟೆಯುನ್ನು ಅವನ ತಲೆಯ ಮೇಲಿರಿಸಿ, ಮುನಸೀಫರ ಹತ್ತಿರಕ್ಕೆ ಬರು ವಂತೆ ಆಜ್ಞಾಪಿಸಿದ.

ಗೋವಿಂದ ಅರ್ಧ ದಾರಿ ನಡೆದಮೇಲೆ, ಏನೋ ಮರತಂತೆ ತಟಕ್ಕನೆ ಹಿಂದಕ್ಕೆ ತಿರುಗಿ "ಅಯ್ಯೋ ಎಂಥ ತಿಳಿಗೇಡಿಯೋ ನಾನು, ನನ್ನ ಕುಡುಗೋಲನ್ನು ಮತ್ತೆ ಮೆದೆ ಹತ್ತಿರ ದಲ್ಲೇ ಮರೆತು ಬಂದೆನಲ್ಲಾ! ಸ್ವಾಮಿ, ಹೋಗಿ ಒಂದು ನಿಮಿಷದಲ್ಲಿ ತಂದು ಬಿಡುತ್ತೇನೆ" ಎಂದು ಮೂಟೆಯನ್ನು ಕೆಳಗೆ ಇಳಿಸಲು ಹೋದ.

ಅದಕ್ಕೆ ತಿಮ್ಮಯ್ಯ "ಅಂದು ನಿನ್ನ ಮಾತು ಕೇಳಿ ಮೋಸ ಹೋದೆ. ಈಗಲೂ ನಂಬಿ ನಿನ್ನನ್ನು ಬಿಡಲು ನಾನೇನು ಬೆಪ್ಪತಕ್ಕಡಿಯಲ್ಲ! ನಾನೇ ಹೋಗಿ ಕುಡುಗೋಲು ತರುತ್ತೇನೆ. ನೀನಿಲ್ಲೇ ಇರು" ಎಂದು ಊರಿನಕಡೆ ನಡೆದ.

ಆತನು ಹೋದುದನ್ನು ನೋಡಿ ಗೋವಿಂದ "ಇದು ಮತ್ತಷ್ಟು ಚೆನ್ನಾಗಿದೆ. ಈ ಭಾರಿ ಧಾನ್ಯ ತುಂಬಾ ಸುಲಭವಾಗಿ ಸಿಕ್ಕಿತು" ಎಂದು ಸಂತೋಷಪಡುತ್ತಾ ಆ ಮೂಟೆ ಯೊಂದಿಗೆ ಮಾಯವಾದ. ಈ ರೀತಿಯಾಗಿ ಎರಡು ಬಾರಿಯೂ ಗೋವಿಂದನ ಬುದ್ಧಿ ವಂತಿಕೆ, ತಿಮ್ಮಯ್ಯನ ತಿಳಿಗೇಡಿತನ ವ್ಯಕ್ತ ವಾಯಿತು.



# ಟಾಕ್ಸಿಯಲ್ಲಿ ಪರ್ಸು

ಮದರಾಸಿನಲ್ಲಿ ಸಿಂಗಾರವೇಲು ಎಂಬ ಒಬ್ಬ ಟಾಕ್ಸಿಯವನಿದ್ದ. ಅವನಲ್ಲಿ ಎರಡು ದುರ್ಗುಣಗಳಿದ್ದವು. ಮೊದಲನೆಯದು, ಅವನ ಟಾಕ್ಸಿ ಹತ್ತಿದವರು ಮೀಟರು ಪ್ರಕಾರ ಅವನಿಗೆ ಬಾಡಿಗೆ ಕೊಟ್ಟರೆ ತೆಗೆದುಕೊಳ್ಳದೆ, ಏನೋ ಒಂದು ಕೊಂಗು ಗಲಾಟೆಮಾಡಿ ಒಂದು ರೂಪಾಯಿಯೋ, ಅರ್ಧ ರೂಪಾಯಿಯೋ ಹೆಚ್ಚಾಗಿ ಎಳೆಯುತ್ತಿದ್ದ.

ಎರಡನೆಯದೆಂದರೆ, ಸಾಮಾನುಗಳನ್ನೆಲ್ಲಾ ಇಳಿಸುವಾಗ ಎಲ್ಲವನ್ನೂ ಇಳಿಸದೆ ಯಾವುದಾದರೊಂದು ಸಾಮಾನನ್ನು ಕಾರಿನೊಳಗೇ ಉಳಿಸಿಕೊಂಡುಬಿಡುತ್ತಿದ್ದ. ಕಾರು ಏರಿದವರು ತುಂಬಾ ಹುಷಾರಾದವರಾಗಿದ್ದು, ಮನೆ ಸೇರಿದಕೂಡಲೇ ಎಲ್ಲ ಸಾಮಾನುಗಳನ್ನು ಲೆಕ್ಕಮಾಡಿ ಎಣಿಸಿಕೊಳ್ಳುವವರಾಗಿದ್ದರೆ, ಸಿಂಗಾರವೇಲು, "ಆ ಮೂಲೆಯಲ್ಲಿ ಈ ಸಾಮಾನು ಇತ್ತು ಸಾರ್. ನಾನು ನೋಡೇ ಇರಲಿಲ್ಲ" ಎಂದೂ ಏನೂ ಅರಿಯದವನಂತೆ ನಾಲಿಗೆಕಚ್ಚಿ, ಕೂಡಲೇ ಆ ಸಾಮಾನು ತಂದು ಕೊಡುವನು. ಅವರೇನಾದರೂ ತುಸ ಮೈಮರೆತಿದ್ದರೆ ಅವರ ಕಣ್ಣಿಗೆ ಮಣ್ಣೆರಚಿ ಸಾಮಾನು ಲಪಟಾಯಿಸುತ್ತಿದ್ದ.

ಒಂದು ದಿನ ಬೆಂಗಳೂರಿನಿಂದ ರಾಮುರಾಯರು ಕುಟುಂಬಸಮೇತರಾಗಿ ರೈಲಿನಲ್ಲಿ ಬಂದು ಸೆಂಟ್ರಲ್ ಸ್ಟೇಷನ್‌ನಲ್ಲಿ ಇಳಿದರು. ಅವರ ಭಾವಮೈದುನ ವೆಂಕಟ್ರಾವ್ ಕ್ರಿಮಿನಲ್ ಪ್ಲೀಡರ್. ಟ್ರಿಪ್ಲಿಕೇನಿನಲ್ಲಿ ವಾಸ ಮಾಡುತ್ತಿದ್ದರು.

ರಾಮುರಾಯರು ಕಾಣಿಸಿದಕೂಡಲೇ ಸಿಂಗಾರವೇಲು 'ಟಾಕ್ಸಿ ಬೇಕೇ ಸಾರ್' ಎಂದು ಕೇಳಿ ಅವರು ಮಾತನಾಡುವ ಮೊದಲೇ ಅವರ ಸಾಮಾನುಗಳನ್ನು ಟ್ಯಾಕ್ಸಿಯಲ್ಲಿಟ್ಟು "ತಾಯಿ ಹತ್ತಿ" ಎಂದು ಹೇಳಿದ. ಅವರೆಲ್ಲಾ ಟ್ಯಾಕ್ಸಿ ಹತ್ತಿದಕೂಡಲೇ "ಎಲ್ಲಿಗೆ ಸಾರ್" ಎಂದು ಸಿಂಗಾರವೇಲು ಕೇಳಿದ. ರಾಮುರಾಯರು ತಮ್ಮ ಭಾವಮೈದುನನ ಅಡ್ರೆಸ್ ಹೇಳಿದರು.

ಟ್ಯಾಕ್ಸಿ ವೆಂಕಟ್ರಾಯರ ಮನೆಮುಂದೆ ನಿಂತಕೂಡಲೇ ಎಲ್ಲರೂ ಕೆಳಗಿಳಿದು ಒಳಗೆ ಹೋದರು. ಅವರನ್ನು ಮನೆಯವರು ಕುಶಲ

ಆರ್. ವೈದೇಹಿ. ಮದರಾಸು.



ಪ್ರಶ್ನೆ ಮಾಡುತ್ತಿರುವಾಗ ಸಿಂಗಾರವೇಲು ಸಾಮಾನುಗಳನ್ನು ಇಳಿಸಿ, ಬಾಡಿಗೆ ಕೇಳಿದ. ರಾಮುರಾಯರು ಮೀಟರ್ ತೋರಿಸಿದಂತೆ ಬಾಡಿಗೆ ಕೊಡಲುಹೋದರೆ ತೆಗೆದುಕೊಳ್ಳಲು ತಕರಾರುಮಾಡಿದ. 'ಹಿಂದಕ್ಕೆ ಹೋಗುವಾಗ ಖಾಲಿಯಾಗಿ ಹೋಗಬೇಕು. ಮೀಟರು ಚಾರ್ಜುಮಾತ್ರ ಕೊಟ್ಟರೆ ಹೇಗೆ?' ಎಂದ. ರಾಮುರಾಯರು ಮತ್ತೊಂದು ರೂಪಾಯಿ ಹೆಚ್ಚಿಗೆ ಅವನ ಕೈಯಲ್ಲಿಟ್ಟರು.

ಸಿಂಗಾರವೇಲು ಗೊಣುಗುಟ್ಟುತಾ ಟ್ಯಾಕ್ಸಿ ಡ್ರೈವ್‌ಮಾಡಿಕೊಂಡು ಹೊರಟುಬಿಟ್ಟ.

ಊಟವಾದನಂತರ ರಾಮುರಾಯರು ಏನೋ ಹುಡುಕಾಡುತ್ತಿರುವುದನ್ನು ನೋಡಿ, ವೆಂಕಟ್ರಾವ್ "ಏನದು ಭಾವಾ?" ಎಂದು ಕೇಳಿದರು.

"ಸ್ಲಿಪ್ಪರ್ಸ್ ಇಟ್ಟಿದ್ದ ರಟ್ಟುಪೆಟ್ಟಿಗೆ ಕಾಣಿಸುತ್ತಿಲ್ಲ. ಇಲ್ಲಿಗೆ ಬರಲು ಎರಡು ದಿನಗಳಹಿಂದೆ ಅದನ್ನು ತೆಗೆದುಕೊಂಡಿದ್ದೆ" ಎಂದರು ರಾಮುರಾಯರು. ಅಷ್ಟರಲ್ಲಿ ಅವರ ಹೆಂಡತಿ "ರೈಲಿನಿಂದ ಇಳಿಯುವಾಗ ನಾನು ಅದನ್ನು ತೆಗೆದುಕೊಂಡಿದ್ದೆ. ಟ್ಯಾಕ್ಸಿಯಲ್ಲಿ ಬಿಟ್ಟುಬಿಟ್ಟೆವೋ ಏನೋ" ಎಂದರು. "ಸಾಯಂಕಾಲ ಸ್ಟೇಷನ್ ಕಡೆ ಹೋಗಿ ನೋಡೋಣ. ಹಾಗೆ ಮರೆತುಬಿಟ್ಟ ವಸ್ತುವೇನಾದರೂ ಇದ್ದರೆ ಭದ್ರವಾಗಿಟ್ಟು ಕೊಡುವುದೂ ಉಂಟು" ಎಂದರು ವೆಂಕಟ್ರಾವ್.

ಸಾಯಂಕಾಲ ಅವರಿಬ್ಬರೂ ಸ್ಟೇಷನ್ ಟ್ಯಾಕ್ಸಿ ಸ್ಟಾಂಡಿಗೆ ಹೋದರು, ಅಲ್ಲಿ ಸಿಂಗಾರವೇಲು ಕಾಣಿಸಲು "ಏನಪ್ಪಾ, ಬೆಳಿಗ್ಗೆ ಟ್ಯಾಕ್ಸಿಯಲ್ಲಿ ಹೊಸ ಸ್ಲಿಪ್ಪರ್ ಇದ್ದ ಪೆಟ್ಟಿಗೆ ಉಳಿದುಹೋಯಿತಂತೆ" ಎಂದರು ವೆಂಕಟ್ರಾವ್.

ಸಿಂಗಾರವೇಲು ಏನೂ ತಿಳಿಯದವನಂತೆ "ಏನಿಲ್ಲವಲ್ಲಾ. ಅಮ್ಮಾವರು ಸಾಮಾನುಗಳನ್ನೆಲ್ಲಾ ಇಳಿಸಿಕೊಂಡರು" ಎಂದು ಗಘಾಬಿಟ್ಟ.

ರಾಮುರಾಯರು ಕಾರಿನಲ್ಲೆಲ್ಲಾ ಒಂದು ಸಾರಿ ಹುಡುಕಿದರು. ಹುಡುಕಿದರೆ ಸಿಕ್ಕಲು ಅದು ಅಲ್ಲೇ ಕೂತಿರುತ್ತದೆಯೇ? ಅದನ್ನು ಕಾರಿನಲ್ಲಿಯೇ ಇಟ್ಟಿರಲು ಸಿಂಗಾರವೇಲು ತಿಳಿಗೇಡಿಯೇನಲ್ಲ.

ಸಿಂಗಾರವೇಲು ಮೇಲೆ ಪೋಲೀಸಿಗೆ ಕಂಪ್ಲೈಂಟ್ ಮಾಡಬೇಕೆನ್ನಿಸಿತು ವೆಂಕಟ್ರಾವಿಗೆ. ಆದರೆ ರಾಮುರಾಯರು "ಹೋಗಲಿ,

ಬಿಡಪ್ಪಾ, ಅಜಾಗರೂಕತೆಯಿಂದ ಇದ್ದದ್ದು ನಮ್ಮ ತಪ್ಪು. ಕಳೆದು ಹೋದ ಸಾಮಾನು ಒಂದು ಜೊತೆ ಜೋಡು ಅಂತ ಅಂದರೆ ಪೋಲೀಸಿನವರೂ ಲಕ್ಷ್ಯ ಮಾಡುವುದಿಲ್ಲ. ಇನ್ನು ಕಂಪ್ಲೈಂಟ್ ಮಾಡಿ ಪ್ರಯೋಜನವಾದರೂ ಏನು?" ಎಂದು ಹೇಳಿ ಆ ಪ್ರಯತ್ನವನ್ನು ನಿಲ್ಲಿಸಿದರು.

ರಾಮರಾಯರು ಒಂದುವಾರ ಮದರಾಸಿನಲ್ಲಿದ್ದು ಕುಟುಂಬ ಸಮೇತರಾಗಿ ಬೆಂಗಳೂರಿಗೆ ಹಿಂತಿರುಗಿದರು.

ಒಂದುದಿನ ವೆಂಕಟ್ರಾವ್ ಅಡಯಾರ್ ಗಾಂಧೀನಗರದಲ್ಲಿ ಅವರ ಸ್ನೇಹಿತರೊಬ್ಬರು ಗೃಹಪ್ರವೇಶಕ್ಕೆಂದು ಊಟಕ್ಕೆ ಕರೆದಿದ್ದರಿಂದ ಅಲ್ಲಿಗೆ ಹೋದರು. ಬರುವಾಗ ಬಸ್ಸಿಗಾಗಿ ಬಹಳಹೊತ್ತು ಕಾದರು. ಬಸ್ಸು ಬರಲಿಲ್ಲ. ಬಹಳ ಬೇಸರವಾಯಿತು. 'ಏನು ಮಾಡೋಣ' ಎಂದು ಯೋಚಿಸುತ್ತಿರುವಾಗ ಟ್ಯಾಕ್ಸಿಯೊಂದು ಆದಾರಿಯಲ್ಲಿ ಹೋಗುತ್ತಾ ಅವರನ್ನು ನೋಡಿ ನಿಂತಿತು.

"ಬನ್ನೀಸಾರ್" ಎಂದ ಡ್ರೈವರ್.

ಬೇರಾವ ಸಮಯದಲ್ಲಾಗಿದ್ದರೂ ವೆಂಕಟ್ರಾವ್ ಬೇಡವೆಂದು ಕಳುಹಿಸಿಬಿಡುತ್ತಿದ್ದರು. ಆದರೆ ಆಗಲೇ ಒಂಬತ್ತು ಗಂಟೆ ಆಗಿಬಿಟ್ಟಿತ್ತು. ಅಷ್ಟೇ ಅಲ್ಲ ಹನಿಬೀಳಲು ಪ್ರಾರಂಭವಾಗಿತ್ತು. ಇದನ್ನು ನೋಡಿ ಬೇಗ ಮನೆ ಸೇರಿಕೊಳ್ಳುವುದು ಉತ್ತಮವೆಂದೆನಿಸಿತು



ವೆಂಕಟ್ರಾಯರಿಗೆ. ಕಾರಿನಲ್ಲಿ ಕುಳಿತುಕೊಂಡು "ಟ್ರಿಪ್ಲಿಕೇನಿಗೆ ಹೋಗಲಿ" ಎಂದರು.

ಹತ್ತುವಾಗ ಗುರುತು ಹಿಡಿಯಲಾಗದಿದ್ದರೂ ಕಾರು ತುಸದೂರ ಹೊರಟ ತರುವಾಯ ವೆಂಕಟ್ರಾವ್‌ಗೆ ಆ ಕಾರು ಡ್ರೈವರ್ ಯಾರೋ ತಿಳಿಯಿತು. ರಾಮರಾಯರ ಜೋಡು ಲಪಟಾಯಿಸಿದವನೇ ಇವನು ಎಂದು ಗುರುತು ಹಿಡಿದರು. ಕೂಡಲೇ ಅವನಿಗೆ ತಕ್ಕಶಾಸ್ತಿಮಾಡಿ ಅಳಿಸಬೇಕೆಂದು ಅನ್ನಿಸಿತು ಅವರಿಗೆ. ಅವನಿಗೆ ಇತರರ ಸಾಮಾನುಗಳನ್ನು ಲಪಟಾಯಿಸುವ ಹೇಯಬುದ್ಧಿಯೆಂದು ತಿಳಿದಿದ್ದುದರಿಂದ ಅವನಿಗೆ ಟೋಪಿಹಾಕಲು ಒಂದು ಉಪಾಯ ಹೂಡಿದರು.

ಇನ್ನೇನು ತಮ್ಮ ಮನೆ ನೂರು ಗಜ ದೂರದಲ್ಲಿದೆ ಅನ್ನುವಾಗ 'ಡ್ರೈವರ್, ಟ್ಯಾಕ್ಸಿ

ಯಲ್ಲಿ ಎಲ್ಲೋ ನನ್ನಪರ್ಸ್ ಬಿದ್ದುಹೋಗಿದೆ. ಯಾವಮೂಲೆಯಲ್ಲಿ ಬಿತ್ತೋ, ಏನೋ. ಎಷ್ಟು ಹುಡುಕಿದರೂ ಸಿಕ್ಕಲಿಲ್ಲ. ಬೆಂಕಿ ಪೆಟ್ಟಿಗೆಯಿದ್ದರೆ ಕೊಡು, ನೋಡೋಣ" ಎಂದರು.

ಸಿಂಗಾರವೇಲು ಹತ್ತಿರ ಬೆಂಕಿಪೆಟ್ಟಿಗೆ ಇರಲಿಲ್ಲವೆಂತಲ್ಲ. ಆದರೆ ಅವನಿಗೆ ಕೊಡಲು ಮನಸ್ಸು ಬರಲಿಲ್ಲ. ಏಕೆಂದರೆ ಪರ್ಸ್ವಿಷಯ ಕಿವಿಗೆಬಿದ್ದ ಕೂಡಲೇ ವೆಂಕಟ್ರಾವ್ ಅಂದು ಕೊಂಡಿದ್ದಂತೆ ಅವನಿಗೆ ದುರಾಶೆ ಹುಟ್ಟಿತು. ಅದು ಅವರ ಕೈಗೆ ಸಿಗದಂತೆ ಮಾಡಬೇಕೆಂದು ಯೋಚಿಸಿದ. ಅವನ ತಲೆ ಕೂಡಲೇ ಕೆಲಸ ಮಾಡಿ, ಅವರನ್ನು ಮೋಸಮಾಡಲು ತಕ್ಕ ಪ್ಲಾನು ಹೊಳೆಯಿತು.

ಅವನು "ಸಾರ್, ನನ್ನ ಹತ್ತಿರ ಬೆಂಕಿ ಪೊಟ್ಟಣವಿಲ್ಲ. ಅದೋ ಆ ಸಂದಿಯಲ್ಲಿ ಒಂದು ಸುಪಾರಿ ಅಂಗಡಿಯಿದೆ. ಅಲ್ಲಿ ಸಿಗುತ್ತೆ ಬೆಂಕಿ ಪೊಟ್ಟಣ. ನಾನೇ ಹೋಗಿ ತರುತ್ತಿದ್ದೆ. ಆದರೆ ಇಂಜಿನ್ ನಿಲ್ಲಿಸಿಬಿಟ್ಟರೆ ಮತ್ತೆ ಸ್ಟಾರ್ಟ್ ಮಾಡಲು ತುಂಬಾ ಅವಸ್ಥೆಪಡಬೇಕು. ನೀವೇ ದಯವಿಟ್ಟು ಹೋಗಿಬರುವಿರಾ?" ಎಂದ. ಅಷ್ಟೇ ಅಲ್ಲ "ಪರ್ಸ್ ಕಳೆದುಹೋದುದರಿಂದ ನಿಮ್ಮಹತ್ತಿರ ಚಿಲ್ಲರೆ ಇರಲಾರದು" ಎಂದು ಅವನು ತನ್ನ ಕಿಸೆಯಿಂದ ಒಂದು ಆಣೆ ಸಹ ತೆಗೆದು ಅವರ ಕೈಗೆ ಕೊಟ್ಟ.

ವೆಂಕಟ್ರಾವ್ ಟ್ಯಾಕ್ಸಿ ಇಳಿದು ಅವನು ಹೇಳಿದ ಸಂದಿನೊಳಗೆ ಹೋದರು.

ಆತನು ನೆನೆಸಿದ್ದಂತೆಯೇ ಸಿಂಗಾರವೇಲು ಅವರು ಅತ್ತ ಹೋದುದನ್ನು ನೋಡಿ ಕೂಡಲೇ ಬ್ರೇಕ್ ಸಡಿಲಮಾಡಿ, ನಲವತ್ತು ಮೈಲಿ ವೇಗದಲ್ಲಿ ಟ್ಯಾಕ್ಸಿಯೊಂದಿಗೆ ಪರಾರಿ ಯಾದ. ಷೆಡ್ಡು ಸೇರುವವರೆವಿಗೂ ಸಿಂಗಾರ ವೇಲು ಎಲ್ಲೂ ಕಾರನ್ನು ನಿಲ್ಲಿಸಲಿಲ್ಲ. ಅಲ್ಲಿ ಸೇರಿದಮೇಲೆ ಆ ಪರ್ಸ್ಗಾಗಿ ತನ್ನ ಟಾರ್ಚಿನ ಸಹಾಯದಿಂದ ಕಾರೆಲ್ಲಾ ತಡಕಾಡಿದ.

ಪರ್ಸ್ ಇದ್ದರಷ್ಟೇ ಕಾಣಿಸಲು? ಈ ಇಲ್ಲದ ಪರ್ಸ್ಗಾಗಿ ಆಶೆಪಟ್ಟು, ನಿಷ್ಕಾರಣವಾಗಿ ಬಾಡಿಗೆ ಕಳೆದುಕೊಂಡ. ಅಷ್ಟೇ ಅಲ್ಲದೆ ಒಂದಾಣೆ ಕೈಯಿಂದ ಬಿಚ್ಚಬೇಕಾಯಿತು. ಚೇಳುಕಡಿದ ಕಳ್ಳನಂತೆ ಸಿಂಗಾರವೇಲು ಒಳ ಗೊಳಗೇ ನೋವು ಅನುಭವಿಸುತ್ತ ಸುಮ್ಮ ನಿದ್ದುಬಿಟ್ಟ. ಬೇರೇನು ತಾನೇ ಮಾಡಬಲ್ಲ?






ಒಂದು ಹಳ್ಳಿಯಲ್ಲಿ ಪಾಪಮ್ಮ ಎಂಬ ಬಡ ವಳಿಗೆ ಜೋಗಪ್ಪ ನಾಗಪ್ಪ ಅಂತ ಇಬ್ಬರು ಮಕ್ಕಳು ಇದ್ದರು. ಚಿಕ್ಕಂದಿನಲ್ಲೇ ಅವರ ತಂದೆ ತೀರಿ ಹೋದುದರಿಂದ ಮಕ್ಕಳನ್ನು ಪೋಷಿಸುವ ಭಾರವೆಲ್ಲಾ ಆಕೆಯ ಮೇಲೆ ಬಿತ್ತು.

ಅದೊಂದು ತೀರಾ ಸಣ್ಣ ಹಳ್ಳಿ. ಆ ಹಳ್ಳಿಗೆ ಹತ್ತಿರದಲ್ಲೇ ಒಂದು ಅಡವಿ. ಹಳ್ಳಿಗೆ ಸುಮಾರು ದೂರದಲ್ಲಿ ದೊಡ್ಡ ದೊಡ್ಡ ಬೆಟ್ಟ ಗಳು ಕಾಣಿಸುತ್ತಿದ್ದವು. ಪಾಪಮ್ಮ ದಿನಾ ಆ ಅಡವಿಗೆ ಹೋಗಿ ಮೂಲಿಕೆಗಳನ್ನೂ, ಔಷ ಧಿಗೆ ಉಪಯುಕ್ತವಾದ ಎಲೆಗಳನ್ನೂ ಆರಿಸಿ ತಂದು, ಆ ಗ್ರಾಮದಲ್ಲಿದ್ದ ವೈದ್ಯನಿಗೆ ಕೊಡು ವಳು. ಆತನು ಕೊಡುವ ಅಷ್ಟೋ ಇಷ್ಟೋ ಹಣದಿಂದ ಕಾಲಕಳೆಯುತ್ತಿದ್ದಳು.

ಜೋಗಪ್ಪ ಹದಿನಾರು ವರ್ಷ ವಯಸ್ಸಿನವ ನಾದ. ನಾಗಪ್ಪನಿಗೆ ಹನ್ನೆರಡು ವರ್ಷ ತುಂಬಿತು.. ಮೂಲಿಕೆಗಳನ್ನು ಆಗೆಯುವುದ ರಲ್ಲಿಯೂ, ಔಷಧಗಳಿಗೆ ಬೇಕಾದ ಎಲೆಗಳನ್ನು ಕೀಳುವುದರಲ್ಲಿಯೂ ತಾಯಿಗೆ ಅವರು ಸಹಾಯ ಮಾಡುತ್ತಿದ್ದರು. ಒಂದು ದಿನ ವೈದ್ಯನು ಯಾವುದೋ ಒಂದು ಮೂಲಿಕೆ ಬೇಕೆಂದು, ಅದಕ್ಕೆ ಸಂಬಂಧಪಟ್ಟ ಗುರುತು ತಿಳಿಸಿ ತೆಗೆದುಕೊಂಡು ಬರುವಂತೆ ಹೇಳಿದ. ಜೋಗಪ್ಪ ನಾಗಪ್ಪ ಅಡವಿಯೆಲ್ಲಾ ಅಲೆದಾಡಿ ದರೂ ಅವು ಸಿಕ್ಕಲಿಲ್ಲ.

ದೂರದಲ್ಲಿ ಕಾಣಬರುತ್ತಿರುವ ಬೆಟ್ಟಗಳಲ್ಲಿ ಅವು ಸಿಗುವುವೆಂದು ತಾಯಿ ಹೇಳಿದಳು. ಅವರು ಮಾರನೆಯದಿನ ಬೆಳಿಗ್ಗೆ ಕಾಲುನಡಿಗೆ ಯಲ್ಲಿ ಹೊರಟರು. ಸೂರ್ಯ ನೆತ್ತಿಯ ಮೇಲೆ ಬರುವ ವೇಳೆಗೆ ಅವರೂ ಬೆಟ್ಟದ ಮಧ್ಯ ಭಾಗ ಸೇರಿದರು.

ಬೆಂಕಿಯಂತೆ ಉರಿಯುತ್ತಿದ್ದ ಆ ಬಿಸಿಲಿ ನಲ್ಲಿ, ಹೊಗೆ ಏಳುತ್ತಿದ್ದ ಆ ಬಂಡೆಗಳ ಮಧ್ಯ ಇಬ್ಬರೂ ಮೂಲಿಕೆಗಳಿಗಾಗಿ ಹುಡುಕಿದರು. ಇನ್ನೇನು ಸೂರ್ಯನು ಅಸ್ತಮಿಸುವ ವೇಳೆಗೆ ತಾವು ತಂದಿದ್ದ ಎರಡು ಚೀಲಗಳಲ್ಲೂ ಮೂಲಿಕೆಗಳನ್ನು ತುಂಬಿದರು.

ಡಿ. ಹೇಮಾವತಿ



ಜೋಗಪ್ಪ ಬೆವರು ಒರಸಿಕೊಂಡು, ಮೈ ಮುರಿಯುತ್ತಾ "ನಾಗೂ, ಇನ್ನು ಮನೆಕಡೆ ಹೊರಡೋಣ ಕಣೋ" ಎಂದ. ಪಾಪ, ನಾಗಪ್ಪ ಆಗಾಗಲೇ ತುಂಬಾ ಸುಸ್ತಾಗಿ ಬಿಟ್ಟು, ಒಂದು ಬಂಡೆಗೆ ಒರಗಿ 'ಉಸ್ಸಪ್ಪಾ' ಅಂತ ಕುಳಿತು ಬಿಟ್ಟಿದ್ದ.

"ಈ ರಾತ್ರಿ ಇಲ್ಲೇ ನಿದ್ರೆಮಾಡಿದರೇ ನಾಯ್ತು" ಎಂದ ನಾಗಪ್ಪ.

ಈ ಮಾತು ಕೇಳಿ ಜೋಗಪ್ಪ ಮೈಮೇಲೆ ಚೇಳು ಬಿದ್ದಂತೆ ಕಂಪಿಸಿದ. "ಈ ಬೆಟ್ಟಗಳ ನಡುವೆ ರಾತ್ರಿ ಹೇಗೆ ಕಳೆಯುವುದು? ಹುಳ ಹುಪ್ಪಟೆ ಇರುತ್ತವೆ. ಏಳು ಹೊರಡೋಣ" ಎಂದ ಕೋಪದಿಂದ.

ನಾಗಪ್ಪನಿಗೆ ತೂಕಡಿಕೆ ಮಧ್ಯೆ ಯಾರೋ ಹಿಡಿದು ಅಲುಗಾಡಿಸಿದಂತಾಯಿತು ಈ ಮಾತು ಕೇಳಿ. "ಊಂ! ನಿದ್ದೆ ಬರುತ್ತಿದೆ. ಹೋಗೋಣ, ಸ್ವಲ್ಪ ಸಮಯ ಹಾಗೇ ಕುಳಿತಿದ್ದು" ಎಂದ ನಿದ್ದೆಯ ಮತ್ತಿನಿಂದ.

ಜೋಗಪ್ಪನಿಗೆ ತಮ್ಮನೆಂದರೆ ಅತಿ ಪ್ರೀತಿ. ಆತ ಮೈಮುರಿದುದನ್ನೂ, ತೂಕಡಿಸುತ್ತಿರುವುದನ್ನೂ ಕಂಡು ಅವನಿಗೆ ಮರುಕವುಂಟಾಯಿತು. ತುಸ ಹೊತ್ತು ವಿರಾಮ ತೆಗೆದುಕೊಂಡು ಹೋಗಬಹುದೆಂದು ತಾನೂ ಸಹ ಮತ್ತೊಂದು ಬಂಡೆಯಮೇಲೆ ನಡುವಾಲಿಸಿದ.

ನಾವು ನಿದ್ರೆಮಾಡುತ್ತಿರುವೆವೆಂದುಕಾಲವೂ ಸಹ ನಿದ್ದೆ ಮಾಡುವುದೇ? ಊಹೂಂ. ಕಾಲಕ್ಕೆ ಆಯಾಸ ವಿಶ್ರಾಂತಿಯೆಂಬುದು ಇಲ್ಲ. ಯಾರಿಗಾಗಿಯೂ ನಿಲ್ಲದೆ ತನ್ನ ಪಾಡಿಗೆ ತಾನು ನಡೆಯುತ್ತಿರುತ್ತದೆ.

ಸೂರ್ಯನು ಅಸ್ತಂಗತನಾದ. ಚಂದಮಾಮ ಮೇಲು ಮೇಲಕ್ಕೆ ಏರುತ್ತಿದ್ದ. ಹಾಲು ಚೆಲ್ಲಿದಂತೆ ಬೆಳದಿಂಗಳು. ಹಗಲೆಲ್ಲಾ ಬಿಸಿಲಿನಲ್ಲಿ ಕೆಲಸಮಾಡಿದ ಜೋಗಪ್ಪ ನಾಗಪ್ಪ ಕಣ್ಣುಮುಚ್ಚಿದ್ದೇ ತಡ ನಿದ್ರೆಯಲ್ಲಿ ಮುಳುಗಿದರು. ಶೀತಲವಾದ ಬೆಳದಿಂಗಳು, ತಂಪಾದ ಗಾಳಿ, ಸೂಜಿಬಿದ್ದರೂ ಕೇಳಿಸುವಂಥ ನಿಶ್ಶಬ್ದ ವಾತಾವರಣ, ಅಣ್ಣ ತಮ್ಮಂದಿರಿಗೆ ಜೋಗುಳ ಪಾಡಿದವು.

ಇದ್ದಕ್ಕಿದಂತೆಯೇ ಪಾರಿವಾಳಗಳು ರೆಕ್ಕೆ ಬಡಿದಂತಹ ಸಣ್ಣ ಮೃದುವಾದ ಶಬ್ದವಾಯಿತು. ಅದಕ್ಕೆ ನಾಗಪ್ಪ ಬೆಚ್ಚಿಬಿದ್ದು

ಕಣ್ಣು ತೆರೆದ. ಅವನಿಗೆ ರಾತ್ರಿ ಹೊತ್ತು ತಾಯಿಯ ಮಗ್ಗುಲಲ್ಲಿ ಮಲಗಿದ ಹೊರತು ನಿದ್ದೆ ಬಾರದು. ಅಷ್ಟು ಭಯ! "ಅಣ್ಣಾ, ಅಣ್ಣಾ" ಎಂದು ಮೆಲ್ಲನೆ ಜೋಗಪ್ಪನ ಹತ್ತಿರ ಸರಿದು, ಅವನ ಭುಜ ಹಿಡಿದು ಅಲುಗಿಸಿದ. ಜೋಗಪ್ಪ ತಟಕ್ಕನೆ ಕಣ್ಣು ಬಿಟ್ಟು ನೋಡಿದ.

'ಬೆಳದಿಂಗಳುಕೂಡಾ ಬಂದು ಬಿಟ್ಟಿತಲ್ಲೋ ನಾಗೂ' ಎಂದ ಜೋಗಪ್ಪ ಹೆದರಿಕೆಯಿಂದ. ಆ ರಾತ್ರಿಯೆಲ್ಲಾ ಅಲ್ಲೇ ಕಳೆಯಬೇಕಾಗುವುದೇನೋ ಎಂದು ಭಯವಾಯಿತು ಅವನಿಗೆ.

'ಅದಲ್ಲಣ್ಣ, ಏನೋ ಓಡಾಡುತ್ತಿರುವಂತೆ ಕೇಳಿಸಿತು. ಅದೇನು ಸಿಂಹವೋ, ಹುಲಿಯೋ?' ಎಂದ ನಾಗಪ್ಪ.

'ಸಿಂಹ ಹುಲಿ ಇಲ್ಲಿಲ್ಲಕಣೋ. ಕೋತಿ ಗೀತಿ ಇರಬಹುದು' ಎಂದ ಜೋಗಪ್ಪ ಭಯದಿಂದ.

ಇಬ್ಬರೂ ಆ ಬೆಳದಿಂಗಳಲ್ಲಿ ಸುತ್ತಲೂ ದೃಷ್ಟಿಸಿದರು. ಎದುರುಗಡೆ ಇದ್ದ ಬಂಡೆಯ ಹಿಂದಿನಿಂದ ಈಸಾರಿ ದೊಡ್ಡ ಧ್ವನಿ ಕೇಳಿಸಿತು. ನಾಗಪ್ಪ ಸರ್‍ರನೆ ಅಣ್ಣನನ್ನು ಗಟ್ಟಿಯಾಗಿ ಅಪ್ಪಿಕೊಂಡು ನಡುಗುತ್ತಾ 'ಅಣ್ಣಾ ಅಣ್ಣಾ' ಎಂದು ನುಡಿದ.

ಅದೇ ಸಮಯಕ್ಕೆ ಸುಶ್ರಾವ್ಯವಾದ ನಗು ಆ ಬಂಡೆಯಮೇಲಿಂದ ಪ್ರತಿಧ್ವನಿಸಿತು.

ಜೋಗಪ್ಪನಿಗೆ ಸ್ವಲ್ಪ ಹೆದರಿಕೆ ಕಡಿಮೆಯಾದಮೇಲೆ ತಲೆಎತ್ತಿ ಅತ್ತಕಡೆ ನೋಡಿದ. ನಾಗಪ್ಪ ಭಯಪಡುತ್ತಲೇ ಮೆಲ್ಲನೆ ಸ್ವಲ್ಪ ಕಣ್ಣು ತೆರೆದ. ಇಬ್ಬರದೃಷ್ಟಿಯನ್ನೂ ನಗುತ್ತಾ




ಆ ಬಂಡೆಯ ಹಿಂಭಾಗದಲ್ಲಿ ಸುಳಿದಾಡುತ್ತಿದ್ದ ಮುದ್ದು ಮುಖಗಳು ಆಕರ್ಷಿಸಿದವು.

ಮರುನಿಮಿಷಕ್ಕೆಲ್ಲಾ ಆ ಬಂಡೆಯ ಹಿಂಭಾಗದಿಂದ ಅನೇಕ ಗಂಧರ್ವ ಕನ್ಯೆಯರು ಅವರ ಹತ್ತಿರಕ್ಕೆ ಬಂದರು. ಅವರ ಸುಂದರವದನ, ಅವರ ಕಿಲಕಿಲ ನಗು, ನಾಗಪ್ಪ ಜೋಗಪ್ಪರನ್ನು ಸ್ತಿಮಿತಗೊಳಿಸಿತು. ಜೋಗಪ್ಪ ನಾಗಪ್ಪ ಎದ್ದು ನಿಂತರು. ಸಹೋದರರಿಬ್ಬರಿಗೂ ಹೆದರಿಕೆ ಹೋಯಿತು. ಆನಂದದಿಂದ ಕೈ ಚಪ್ಪಾಳೆ ತಟ್ಟಿದರು. 'ಎಷ್ಟು ಅಂದವಾಗಿದ್ದಾರೆ ಈ ಹುಡುಗಿಯರು" ಎಂದ ಜೋಗಪ್ಪ. 'ಎಷ್ಟು ಸೊಗಸಾಗಿ ಆಡುತ್ತಿದ್ದಾರೆ' ಎಂದ ನಾಗಪ್ಪ.

ಆ ಮಾತುಗಳು ಅವರಬಾಯಿಂದ ಬಂದ ಕೂಡಲೇ ಅವರ ನರ್ತನ ಮಾಡುವುದು





ನಿಂತುಹೋಯಿತು. ಹಾಡೂಮುಗಿಯಿತು. ಆ ಗಂಧರ್ವ ಕನ್ಯೆಯರು ಆ ಅಣ್ಣ ತಮ್ಮಂದಿರ ಸುತ್ತೂ ನಿಂತು ಸಲ್ಲಾಪದಲ್ಲಿ ಮುಳುಗಿದರು.

'ನಮ್ಮ ಊರಿಗೆ ಬರುವಿರಾ? ತುಂಬಾ ಚೆನ್ನಾಗಿದೆ' ಎಂದಳು ಓರ್ವ ಗಂಧರ್ವಕನ್ಯೆ. 'ಓ, ಬರುತ್ತೇವೆ. ದಾರಿ ಎತ್ತಕಡೆ' ಎಂದು ಕೇಳಿದ ನಾಗಪ್ಪ. ಅವಸರಪಡಬೇಡವೆಂದು ತಮ್ಮನನ್ನು ಎಚ್ಚರಿಸಿದ ಜೋಗಪ್ಪ.

'ಅದೇ ನಮ್ಮ ಊರಿಗೆ ದಾರಿ' ಎಂದು ಓರ್ವ ಗಂಧರ್ವಕನ್ಯೆ ಬೆರಳಿಂದ ಒಂದುಕಡೆ ತೋರಿಸಿದಳು.

ಜೋಗಪ್ಪ, ನಾಗಪ್ಪ ಅತ್ತನೋಡಿದರು. ಅದೊಂದು ಅದ್ಭುತ ದೃಶ್ಯ. ಅವರು ಆ ಮನೋಹರದೃಶ್ಯವನ್ನು ಕಂಡು ಮಾರು ಹೋದರು.

'ಅದೊಂದು ಇಂದ್ರಧನುಸ್ಸಿನಂತೆ ಇದೆಯಲ್ಲಾ' ಎಂದ ಜೋಗಪ್ಪ.

'ಇಂದ್ರಧನುಸ್ಸಲ್ಲ. ನಮ್ಮ ಊರಿಗೂ ಈ ಬೆಟ್ಟಗಳಿಗೂ ಮಧ್ಯ ಇರುವ ಸೇತುವೆ' ಎಂದಳು ಆ ಕನ್ಯೆ.

'ಹೋಗೋಣವೇ?' ಎಂದು ನಾಗಪ್ಪ ಅಣ್ಣನನ್ನು ಕೇಳಿದ.

'ಏನೋಪ್ಪಾ' ಎಂದು ಒಂದು ಬಗೆಯಾಗಿ ಸಂಶಯವನ್ನು ವ್ಯಕ್ತಪಡಿಸಿದ ಜೋಗಪ್ಪ.

ಇದೆಲ್ಲವನ್ನೂ ಕೇಳುತ್ತಿದ್ದ ಗಂಧರ್ವ ಕನ್ಯೆಯರು ಆ ಅಣ್ಣ ತಮ್ಮಂದಿರ ಕೈಗಳನ್ನು ಮೃದುವಾದ ತಮ್ಮ ಕರಗಳಿಂದ ಹಿಡಿದುಕೊಂಡು ಆ ಸೇತುವೆಮೇಲಿಂದ ತಮ್ಮ ಲೋಕಕ್ಕೆ ಕರೆದುಕೊಂಡು ಹೋದರು.

ಸಹೋದರರ ಆನಂದಕ್ಕೆ ಪಾರವೇ ಇಲ್ಲ. ಅವರು ಪುರಾಣಗಳಲ್ಲಿ ಕೇಳಿದ್ದ ಕನಸುಗಳಲ್ಲಿ ಮಾತ್ರವೇ ಕಾಣುತ್ತಿದ್ದ ಎಲ್ಲ ಸೊಬಗನ್ನು, ಆನಂದವನ್ನು ಅವರು ಅಲ್ಲಿ ನೋಡಿದರು. ದಿನ, ತಿಂಗಳು, ವರ್ಷಗಳು ಕಳೆಯುತ್ತಿದ್ದರೂ ಸಹ ಅವರಿಗೆ ಮನೆಯ ಯೋಚನೆಯಾಗಲೀ, ತಾಯಿಯ ಜ್ಞಾಪಕವಾಗಲೀ ಉಂಟಾಗಲಿಲ್ಲ. ಗಂಧರ್ವಕನ್ಯೆಯರ ಸುಂದರವದನಗಳು, ಇಂಪಾದಹಾಡು, ಸವಿಸವಿಯಾದ ಮಾತುಗಳು ಅವೆಲ್ಲವನ್ನೂ ಮರೆತುಬಿಡುವಂತೆ ಮಾಡಿದವು.

ಒಂದುದಿನ ಜೋಗಪ್ಪ, ನಾಗಪ್ಪ ಆ ಗಂಧರ್ವಲೋಕದಲ್ಲಿದ್ದ ಬೆಟ್ಟಗಳಮೇಲೆ ಶಿಳ್ಳಿ



ಹಾಕುತ್ತಾ ನಡೆಯುತ್ತಿದ್ದರು. ಹಠಾತ್ತನೆ ನಾಗಪ್ಪನ ದೃಷ್ಟಿ ದಾರಿಯ ಪಕ್ಕದಲ್ಲಿದ್ದ ಗುಡ್ಡದಮೇಲೆ ಬೆಳೆದಿದ್ದ ಒಂದು ಮರದಮೇಲೆ ಬಿತ್ತು. 'ಅಣ್ಣಾ ಇಂಥಾ ಮರ ನಾವೆಲ್ಲೋ ನೋಡಿದಂತೆ ಇದೆಯಲ್ಲಾ' ಎಂದ ನಾಗಪ್ಪ. ಜೋಗಪ್ಪ ಅದನ್ನು ನೋಡಿದ. ಅವನಿಗೆ ಕೂಡಲೇ ಜ್ಞಾಪಕಕ್ಕೆ ಬಂತು. ಆ ಗಿಡದ ಎಲೆ ಮತ್ತು ಮೂಲಿಕೆಗಳಿಗಾಗಿಯೇ ತಾವು ಮನೆಯಿಂದ ಹೊರಟಿದ್ದು ಎಂತ!

ತಾವಿಬ್ಬರೂ ಮತ್ತು ತಮ್ಮ ತಾಯಿಯೂ ಸುತ್ತಿಮುತ್ತಿ ಇರುವ ಗ್ರಾಮಗಳಿಗೂ, ಬೆಟ್ಟದಮೇಲೂ ಮೂಲಿಕೆಗಳಿಗಾಗಿ ಹುಡುಕಲು ಹೋಗುವುದೂ ತರುವುದೂ ಎಲ್ಲಾ ನಿನ್ನೆಮೊನ್ನೆ ನಡೆದಂತೆ ತೋರಿತು. 'ತಾಯಿ ಏನೆಂದು ಕೊಳ್ಳುತ್ತಿರುವಳೋ, ಏನೋ— ರಾತ್ರಿ ಹಿಂತಿರುಗದಿದ್ದರೆ ಆಕೆ ಕಳವಳಪಡುವುದಿಲ್ಲವೇ?' ಎಂದು ಅನ್ನಿಸಿತು. ಈ ವಿಷಯ ಇಬ್ಬರಿಗೂ ತುಂಬಾ ದುಃಖವನ್ನುಂಟು ಮಾಡಿತು. ನೆಟ್ಟಗೆ ಅವರು ಗಂಧರ್ವಕನ್ಯೆಯರ ಹತ್ತಿರಕ್ಕೆ ಹೋಗಿ 'ಇಲ್ಲಿಗೆ ನಾವು ಬಂದು ಎಷ್ಟು ದಿನಗಳಾದವು' ಎಂದು ಕೇಳಿದರು.

ಅವರು ನಗುತ್ತಾ 'ನಿಮ್ಮ ದೇಶದಲ್ಲಿರುವಂತೆ ಇಲ್ಲಿ ಕಾಲವನ್ನು ಅಳೆಯಲು ಗಡಿಯಾರಗಳಿಲ್ಲ.' ಎಂದರು.

ಹಾಗಾದರೆ ನಾವು ನಮ್ಮ ದೇಶಕ್ಕೆ ಹೋಗುವೆವು' ಎಂದರು ಇಬ್ಬರೂ.

'ಏಕೆ, ಇಲ್ಲಿ ಚೆನ್ನಾಗಿಲ್ಲವೇ?' ಎಂದು ಸಂತೈಸಲೆತ್ನಿಸಿದರು ಗಂಧರ್ವಕನ್ಯೆಯರು.



'ಚೆನ್ನಾಗಿಯೇನೋ ಇದೆ. ಆದರೆ ನಾವು ತೆಗೆದುಕೊಂಡು ಹೋಗಬೇಕಾದ ಮೂಲಿಕೆಗಳ ಸಂಗತಿ ಮರೆತು, ಇಲ್ಲಿ ಕಾಲಕಳೆದೆವು. ಇನ್ನಾದರೂ ಹೋಗಲೇಬೇಕು' ಎಂದರವರು.

ಎಷ್ಟು ಹೇಳಿನೋಡಿದರೂ ಲಾಭವಾಗದಿರಲು ಗಂಧರ್ವಕನ್ಯೆಯರು ಜೋಗಪ್ಪ, ನಾಗಪ್ಪರನ್ನು ಇಂಧ್ರಧನಸ್ಸಿನಂತಿದ್ದ ಸೇತುವೆ ಮೇಲಿಂದ ಮತ್ತೆ ಈ ಲೋಕಕ್ಕೆ ಕರತಂದು ಬಿಟ್ಟರು.

ಜೋಗಪ್ಪ, ನಾಗಪ್ಪ ಸಾಯಂಕಾಲಕ್ಕೆಲ್ಲಾ ಮೂಲಿಕೆಗಳಿದ್ದ ಚೀಲಗಳೊಂದಿಗೆ ಮನೆ ಸಮೀಪಿಸಿದರು.

ಅವರ ಮನೆ ಅವರೇ ಗುರುತು ಹಿಡಿಯಲಾರದಷ್ಟು ಬದಲಾಯಿಸಿಬಿಟ್ಟಿದೆ. ಮನೆಯ

ಮೇಲುಚಾವಣಿ ಇನ್ನೇನು ಕುಸಿದು ಬೀಳುವ ಸ್ಥಿತಿಯಲ್ಲಿದೆ. ಮನೆ ಬಾಗಿಲು ಹುಳತಿಂದು ಚೂರು ಚೂರಾಗಿ ಕೆಳಗೆ ಬೀಳುತ್ತಿದೆ. ಅವರದೆಲ್ಲವನ್ನೂ ಕಂಡು ಆಶ್ಚರ್ಯಚಕಿತ ರಾದರು. ಮೆಲ್ಲನೆ ಕದ ತಟ್ಟಿದರು.

'ಯಾರಪ್ಪಾ ಅದು' ಎಂದು ನಡುಗುತ್ತಿರುವ ಧ್ವನಿಯಿಂದ ಒಬ್ಬ ವೃದ್ಧಳು ಮೆಲ್ಲನೆ ಬಾಗಿಲು ತೆಗೆದಳು. ಒಂದು ಕ್ಷಣ ರೆಪ್ಪೆ ಬಡಿಯದೆ ಬಂದಿದ್ದ ಇಬ್ಬರು ಹುಡುಗರನ್ನೂ ನೋಡಿ 'ನೀವೇ, ನನ್ನ ಕಂದಮ್ಮಗಳಿರಾ, ಹನ್ನೆರಡು ವರ್ಷಕಳೆದರೂ, ಅಂದು ಮನೆ ಬಿಟ್ಟಾಗ ಹೇಗಿದ್ದಿರೋ ಹಾಗೇ ಇರುವಿರಲ್ಲಾ' ಎಂದು ಸಂತೋಷಭರದಿಂದ ಅಪ್ಪಿಕೊಂಡಳು.

ಜೋಗಪ್ಪ, ನಾಗಪ್ಪ ಬಿಕ್ಕಿಬಿಕ್ಕಿ ಅತ್ತುಬಿಟ್ಟರು. ಗಂಧರ್ವಕನ್ಯೆಯರ ಅಂದಚೆಂದಗಳಿಗೆ ಮಾರುಹೋಗಿ, ಹೆತ್ತ ಅಮ್ಮನಿಗೆ ಬಾಧೆಯನ್ನುಂಟುಮಾಡಿದುದಕ್ಕೆ ತಳಮಳಿಸಿದರು. 'ಇದೋ ಈ ಚೀಲಗಳಲ್ಲಿ ಮೂಲಿಕೆಗಳಿವೆ. ತುಂಬಾ ತಂದಿದ್ದೇವೆ' ಎಂದು ತಾಯಿಯಕೈಗೆ ಅವುಗಳನ್ನು ಕೊಟ್ಟರು.

'ಇಷ್ಟುವರ್ಷಗಳಾದಮೇಲೆ ಇನ್ನು ಈ ಮೂಲಿಕೆಗಳಿಂದಾಗುವ ಉಪಯೋಗವೇನು! ಅವು ಒಣಗಿಹೋಗಿರುತ್ತವೆ. ನೀವು ಹಿಂತಿರುಗಿ ಬಂದಿರಿ. ಅಷ್ಟೇಸಾಕು' ಎಂದು ಪಾಪಮ್ಮ ಆ ಚೀಲಗಳನ್ನು ತೆಗೆದುಕೊಂಡು ಬಿಚ್ಚಿನೋಡಿದಳು. ಆಕೆಗೆ ಅವುಗಳಲ್ಲಿ ಪಳಪಳನೆ ಹೊಳೆಯುವ ಮುತ್ತು ಮತ್ತು ರತ್ನಗಳು ಕಾಣಿಸಿದವು. ಆಶ್ಚರ್ಯದಿಂದ ಚೀಲದಲ್ಲಿ ಕೈಹಾಕಿ ಒಂದುಹಿಡಿ ತೆಗೆದಳು. ಒಣಗಿಹೋದ ಮೂಲಿಕೆಗಳಿಗೂ, ಎಲೆಗಳಿಗೂ ಮುತ್ತು ಮತ್ತು ರತ್ನಗಳು ಅಂಟಿಕೊಂಡಿವೆ! ಅದುವರೆವಿಗೂ ಈ ವಿಷಯವನ್ನು ಅರಿಯದ ಜೋಗಪ್ಪ ನಾಗಪ್ಪ ಆನಂದಪರವಶರಾದರು.

ಪಾಪಮ್ಮ ಆನಂದಬಾಷ್ಪವನ್ನು ಸುರಿಸಿದಳು. ಇಬ್ಬರು ಮಕ್ಕಳನ್ನೂ ಗಟ್ಟಿಯಾಗಿ ಅಪ್ಪಿಕೊಂಡು ಮುದ್ದಾಡಿದಳು. ಮುತ್ತು ಮತ್ತು ರತ್ನಗಳೊಂದಿಗೆ ಹಿಂತಿರುಗಿದ್ದಕ್ಕೆ ತಮ್ಮ ತಾಯಿ ಆನಂದಪಡುತ್ತಿರುವಳೆಂದು ಆ ಹುಡುಗರು ತಿಳಿದುಕೊಂಡರೇಹೊರತು, ಪ್ರಾಣದೊಂದಿಗೆ ಹಿಂತಿರುಗಿಬಂದ ಮಕ್ಕಳನ್ನು ನೋಡಿ ತಾಯಿ ಅಮಿತ ಆನಂದಪಡುತ್ತಿರುವಳೆಂದು ಆ ಎಳೆ ಹುಡುಗರಿಗೆ ತಿಳಿಯದಲ್ಲವೇ!





# ದಾಯಾದಿಗಳು

**ಚೆ**ಬ್ಬುಲಿ ರೈತ ರಾಮಣ್ಣನ ಮನೆ ನಾಯಿ. ಧೈರ್ಯಸಾಹಸಕ್ಕೆ ವಿಶ್ವಾಸಕ್ಕೆ ಅದಕ್ಕೆ ಅದೇ ಸಾಟಿ. ಒಂದು ದಿನ ಬೆಳಿಗ್ಗೆ ಚೆಬ್ಬುಲಿ ಹಾಗೇ ತಿರುಗಾಡಿಕೊಂಡು ಬರಲು ಪಕ್ಕದ ಕಾಡಿಗೆ ಹೋಯಿತು. ಹಾಗೇ ತಿರುಗಾಡುತ್ತಿರುವಾಗ ಅದಕ್ಕೆ ಒಂದು ಪೊದರಿನ ಹತ್ತಿರ ಕುಳಿತಿದ್ದ ತೋಳ, ಅದರ ಪಕ್ಕದಲ್ಲೆ ಒಂದು ನರಿ ಇರುವುದು ಕಾಣಿಸಿತು.

ಚೆಬ್ಬುಲಿ ಕೂಡಲೇ ಹಿಂದಿರುಗಲು ಸಿದ್ಧವಾಯಿತು. ಹಾಗೆ ಆ ರೀತಿ ಮಾಡ ಹೋದುದು ಭಯಪಟ್ಟು ಅಲ್ಲ. ಏಕೋ ಏನೋ ಆ ಎರಡು ಪ್ರಾಣಿಗಳ ನೋಟ, ಅವು ಕುಳಿತಿದ್ದ ಭಂಗಿ ತುಂಬಾ ಅಸಹ್ಯವನ್ನುಂಟು ಮಾಡಿತು. "ಅಣ್ಣಾ ನಿಲ್ಲು, ಒಂದು ಸಣ್ಣ ವಿಷಯ" ಎಂದು ನರಿ ಕೂಗಿತು. ಅದನ್ನು ಕೇಳಿ ಚೆಬ್ಬುಲಿ ತೋಳ ಮತ್ತು ನರಿ ಕುಳಿತಿದ್ದ ಜಾಗಕ್ಕೆ ಹೋಯಿತು.

ನರಿ ಬಾಲ ಆಡಿಸಿ, ಕಿವಿಗಳನ್ನು ಟಪಟಪನೆ ಬಡಿದು ಹೀಗೆ ಹೇಳಲು ಪ್ರಾರಂಭಿಸಿತು. "ಅಣ್ಣಾ, ತೋಳ ಮತ್ತು ನಾನೂ ನಮ್ಮ ಕುಟುಂಬ ವಿಷಯವನ್ನೇ ಪ್ರಸ್ತಾಪಿಸುತ್ತಿದ್ದೆವು. ನಿನಗೆ ತಿಳಿದಿದೆಯೋ ಇಲ್ಲವೋ, ನಾವು ನಾವು ಎಲ್ಲಾ ದಾಯಾದಿಗಳು. ಬಹಳ ದಿನಗಳ ಹಿಂದೆ ನಿನ್ನ ಪೂರ್ವಿಕರು ಮನುಷ್ಯರೊಂದಿಗೆ ಪರಿಚಯಬೆಳೆಸಿ, ಗ್ರಾಮಗಳಲ್ಲೂ ಪಟ್ಟಣಗಳಲ್ಲೂ ವಾಸಿಸುವ ಏರ್ಪಾಡು ಮಾಡಿಕೊಂಡರು. ತೋಳದ ಶಾಖೆಯವರೂ, ನಮ್ಮವರೂ ಅಡವಿಗಳಲ್ಲೇ ಇದ್ದು ಬಿಟ್ಟರು. ಚಳಿ ವಿಪರೀತವಾದುದರಿಂದ ತೋಳದ ವಂಶದವರು ಮೈಮೇಲೆಲ್ಲಾ ಕೂದಲು ಬೆಳೆಸಿಕೊಂಡರು; ನಾನು ಮುಖ್ಯ ಏನು ಹೇಳಲು ಹೊರಟೆ ಅಂದರೆ ನಾವು ನಾವು ದಾಯಾದಿಗಳು, ಅಣ್ಣತಮ್ಮಂದಿರು" ಎಂದಿತು.

ತೋಳರಾಯನು ಹೌದೆಂದು ಅನುಮೋದಿಸಿ ತನ್ನ ಬಾಲವನ್ನು ಆಡಿಸಿತು. ಚೆಬ್ಬುಲಿಗೆ ಆ ಮಾತುಗಳಲ್ಲಿ ತುಂಬಾ ವಿಶ್ವಾಸ ವುಂಟಾಯಿತು. "ಹಾಗೋ—ಸರಿ, ನಿಮಗೆ ಸಮಯ ದೊರೆತಾಗ ನಮ್ಮ ಮನೆ ಕಡೆ

ಎಂ. ಟಿ. ಜಾನಕಿ, ಮಲ್ಲೇಶ್ವರ





ಬಂದು ಹೋಗಿ" ಎಂದು ತೋಳ ಮತ್ತು ನರಿಯನ್ನು ಆಹ್ವಾನಿಸಿತು ಚೆಬ್ಬುಲಿ.

ಆ ರಾತ್ರಿ ಕತ್ತಲಾದ ಮೇಲೆ ತೋಳ ಮತ್ತು ನರಿ ಚೆಬ್ಬುಲಿ ಮನೆಗೆ ಬಂದವು. ಯಜಮಾನ ತನಗಾಗಿ ಕೊಟ್ಟಿದ್ದ ಆಹಾರದಲ್ಲಿ ಚೆಬ್ಬುಲಿ ಅವುಗಳಿಗೂ ಪಾಲುಕೊಟ್ಟು ಸತ್ಕಾರ ಮಾಡಿತು. ತುಸಹೊತ್ತು ಮಾತುಕತೆ ಆಡಿ, ತಮ್ಮ ಕೃತಜ್ಞತೆ ಸೂಚಿಸಿ, ತೋಳ ಮತ್ತು ನರಿ ಕಾಡಿಗೆ ಹಿಂತಿರುಗಿದುವು.

ಬೆಳಗಾಯಿತು. ಚೆಬ್ಬುಲಿ ರೈತ ರಾಮಣ್ಣನ ಮನೆಮುಂದೆ ಅಡ್ಡಾಡುತ್ತಿತ್ತು. ಹಠಾತ್ತನೆ ಪಕ್ಕದ ಮನೆಯಾಕೆ ಗೊಳೋ ಎಂದು ಅಳಲು ಪ್ರಾರಂಭಿಸಿದಳು. ಆಕೆ ಏಕೆಹಾಗೆ ಅತ್ತಳು ಎಂದು ನೀವು ಕೇಳಬಹುದು. ಹಿಂದಿನ ದಿನ ರಾತ್ರಿ ಮನೆಯ ಮಾಡಿನ ಕೆಳಗೆ ಬುಟ್ಟಿಯಲ್ಲಿ ಹಾಕಿ ಮುಚ್ಚಿಟ್ಟಿದ್ದ ಎರಡು ಕೋಳಿಗಳ ಸುಳಿವೇ ಇಲ್ಲ. ಹಿತ್ತಲಲ್ಲಿ ಕಟ್ಟಿ ಹಾಕಿದ್ದ ಕುರಿ ಮರಿಯ ಎಲುಬುಗೂಡು ಮಾತ್ರವಿದೆ.

ಚೆಬ್ಬುಲಿಗೆ ಆಶ್ಚರ್ಯವಾಯಿತು. ಕೋಳಿ ಮತ್ತು ಕುರಿಮರಿಯನ್ನು ಯಾರು ಎತ್ತಿಕೊಂಡು ಹೋಗಿರಬಹುದು ಎಂಬ ಸಮಸ್ಯೆಯನ್ನು ಬಿಡಿಸಲಾಗದೆ ಮನಸ್ಸಿನಲ್ಲಿ ತುಯ್ಯಾಟ ಪ್ರಾರಂಭವಾಯಿತು. ತಾನೇನೋ ತುಂಬಾ ವಿಶ್ವಾಸಪಾತ್ರವಾದ ಪ್ರಾಣಿ ಎಂದು ಅದಕ್ಕೆ ತಿಳಿದಿದೆ. ತನ್ನ ದಾಯಾದಿಗಳಾದ ನರಿ ಮತ್ತು ತೋಳಸಹ ಒಳ್ಳೆಯವೆಂದು ಅದರ ದೃಢ ನಂಬಿಕೆ. ಹಾಗಿರುವಪಕ್ಷಕ್ಕೆ ಈ ತುಡುಗು ಮಾಡಿದ ದುರ್ಮಾರ್ಗಿಗಳು ಯಾರು ಇರಬಹುದು ಎಂದು ಯೋಚಿಸಲಾರಂಭಿಸಿತು.

ಕತ್ತಲಾಯಿತು. ತೋಳ ಮತ್ತು, ನರಿ ಯಥಾಪ್ರಕಾರ ಬಂದವು. ಎಂದಿನಂತೆ ಚೆಬ್ಬುಲಿ ತನ್ನ ಆಹಾರದಲ್ಲಿ ಸ್ವಲ್ಪ ಭಾಗವನ್ನು ಅವುಗಳಿಗೂ ಕೊಟ್ಟು, ಅವುಗಳೊಂದಿಗೆ ಹೀಗೆಂದಿತು: "ಇನ್ನುಮೇಲೆ ನೀವು ಬರುವ ಹಾಗಿದ್ದರೆ ಬೆಳಗಿನ ಹೊತ್ತು ಬನ್ನಿ."

ಅದಕ್ಕೆ ತೋಳ ಮತ್ತು ನರಿ ಏಕಕಂಠದಿಂದ ಅಂದವು "ಆರೆ, ಹಗಲುಹೊತ್ತು ನಮಗೆ ಪುರಸತ್ತು ಎಲ್ಲಿದೆ?"

ಬೆಳಗಾಯಿತು. ಪಕ್ಕದ ಮನೆಯಲ್ಲಿ ದೊಡ್ಡ ಗಲಭೆ. ರೈತ ರಾಮಣ್ಣಸಹ ಕಿರುಚಾಡುತ್ತಿದ್ದಾನೆ. ಮೂರು ಬಾತು ಮತ್ತು

ಮೇಕೆಮರಿಯ ಸುಳಿವೇ ಇಲ್ಲವಂತೆ! ಗಾಳಿಗೆ ಹಾರಾಡುತ್ತಿದ್ದ ಕೆಲವು ಬಾತಿನ ಪುಕ್ಕಗಳು, ಮೇಕೆಮರಿಯ ಮೂಳೆಗಳುಮಾತ್ರ ಕಾಣಿಸುತ್ತಿವೆ.'

ಚೆಬ್ಬುಲಿ ಗ್ರಹಿಸಿತು. ತನ್ನ ತಿಳಿಗೇಡಿತನಕ್ಕೆ ಚಿಂತಿಸಿತು. ಯಜಮಾನನಿಗೆ ನಿಜವಾಗಿ ತಾನು ದ್ರೋಹವೆಸಗಿದೆನೆಂದು ವ್ಯಥೆಪಟ್ಟಿತು. ಕತ್ತಲಾದಕೂಡಲೇ ಮಾಮೂಲಿನಂತೆ ತೋಳ ಮತ್ತು ನರಿಗಳ ಬರುವಿಕೆಗಾಗಿ ಕಾದುಕೊಂಡಿತು.

ಇಂದೂ ಅಷ್ಟೇ. ಚೆಬ್ಬುಲಿಯ ಸತ್ಕಾರಕ್ಕೆ ತಮ್ಮ ಧನ್ಯವಾದಗಳನ್ನು ಅರ್ಪಿಸಿ, ತೋಳ ಮತ್ತು ನರಿ ಹೊರಡಲು ಸಿದ್ಧವಾದುವು. ಅವುಗಳಿಗೆ ಕಾಣದಂತೆ ಚೆಬ್ಬುಲಿ ಹಿಂಬಾಲಿಸಿತು. ಅದು ನೋಡುತ್ತಿದ್ದಂತೆಯೇ ತೋಳ ಮೆದೆಯ ಪಕ್ಕದಲ್ಲಿ ಮಲಗಿದ್ದ ಮೇಕೆಯ ಮರಿಯನ್ನು ಬಾಯಿಯಲ್ಲಿ ಕಚ್ಚಿಕೊಂಡಿತು. ಚೆಬ್ಬುಲಿಗೆ ಅದನ್ನು ನೋಡಿ ತಡೆಯಲಾರದಷ್ಟು ಕೋಪಬಂತು. ಗಟ್ಟಿಯಾಗಿ ಬೊಗಳುತ್ತಾ ತೋಳದ ಮೇಲೆಹಾರಿ, ಕಾದಾಡಿ ಮೇಕೆ ಮರಿಯನ್ನು ಬಿಡಿಸಿಕೊಂಡಿತು.

ಆ ಪಕ್ಕದಲ್ಲೇ ಕೋಳಿಗಳಿದ್ದ ಸ್ಥಳಕ್ಕೆ ನುಗ್ಗುತ್ತಿದ್ದ ನರಿ ಈ ಶಬ್ದ ಕೇಳಿ ಗಬಗಬನೆ ಓಡಿಬಂದು 'ಅಯ್ಯಯ್ಯೋ, ಕುಟುಂಬ ಗೌರವವನ್ನು ಹಾಳು ಮಾಡಿದನಲ್ಲಾ ಈ ತೋಳ! ಏನನ್ಯಾಯ, ಏನನ್ಯಾಯ!' ಎಂದು ಸಹಾನುಭೂತಿ ತೋರಿಸಿತು.

ಮೊದಲೇ ಕೋಪದಿಂದ ಕುದಿಯುತ್ತಿದ್ದ




ಚೆಬ್ಬುಲಿಗೆ ಈ ಮಾತುಗಳು ಮುಳ್ಳಿನಂತೆ ಚುಚ್ಚಿದಂತಾಯಿತು. ತೋಳ ನರಿಗಳನ್ನು ಉದ್ದೇಶಿಸಿ "ದಾಯಾದಿಗಳೆಂದು ಹೇಳಿಕೊಂಡು ನನಗೆ ಮೋಸ ಮಾಡಿದಿರಿ. ನೀವು ದುಷ್ಟರು. ರೂಪದಲ್ಲೇನೋ ನನ್ನ ಹೋಲಿಕೆ ಇರಬಹುದು. ಬುದ್ಧಿಯಲ್ಲಿ ಮಾತ್ರ ನಿಮಗೂ ನನಗೂ ಹೋಲಿಕೆಯೇ ಇಲ್ಲ. ಈ ಸಾರಿ ನಿಮ್ಮನ್ನು ಬಿಡುತ್ತಿದ್ದೇನೆ. ಹೊರಡಿ ಇಲ್ಲಿಂದ. ಇನ್ನೆಂದಾದರೂ ಈ ಸುತ್ತಿಮುತ್ತಲಿನ ಪ್ರದೇಶದಲ್ಲಿ ಕಾಣಸಿಕ್ಕಿದಿರೋ ನಿಮ್ಮ ಪ್ರಾಣ ಉಳಿಯಲಿಕ್ಕಿಲ್ಲ, ಹುಷಾರ್" ಎಂದು ಎಚ್ಚರಿಸಿತು.

ತೋಳ ಮತ್ತು ನರಿ ಬದುಕಿದೆಯಾ ಬಡಜೀವವೇ ಎಂದು ಹಿಂತಿರುಗಿ ಸಹ ನೋಡದೆ ಕಾಡಿನಕಡೆ ಕಾಲುಕಿತ್ತವು.




ಕಾಂತಯ್ಯ ಕೋಟಯ್ಯ ಅಕ್ಕಪಕ್ಕದ ಮನೆಗಳಲ್ಲಿ ವಾಸಿಸುತ್ತಿದ್ದರು. ವ್ಯವಸಾಯದ ಕೆಲಸ ಕಾರ್ಯಗಳು ಮೊದಲುಗೊಂಡು ಪ್ರತಿಯೊಂದು ಸಣ್ಣ ವಿಷಯದಲ್ಲೂ ಒಬ್ಬರಿಗೊಬ್ಬರು ಸಹಾಯ ಮಾಡಿಕೊಳ್ಳುತ್ತ ತುಂಬಾ ಅನ್ಯೋನ್ಯತೆಯಿಂದಿದ್ದರು.

ಒಂದುದಿನ ಹಠಾತ್ತನೆ ಅವರಿಬ್ಬರೂ ಮನಸ್ವೀಬಯ್ಯುತ್ತಾ, ಕೇಶಾಕೇಶಿಗೆ ಇಳಿದುದನ್ನು ಕಂಡು ಎಲ್ಲರಿಗೂ ಆಶ್ಚರ್ಯವಾಯಿತು. ನೋಡಲು ಬಂದವರು ಅವರ ಕಚ್ಚಾಟಕ್ಕೆ ಕಾರಣವೇನೋ ತಿಳಿಯಲು, ಇಬ್ಬರನ್ನೂ ಸಮಾಧಾನ ಪಡಿಸಲು ಬಹಳ ಪ್ರಯತ್ನಿಸಿದರು.

ಯಾರೆಷ್ಟೇ ಸಮಾಧಾನ ಹೇಳಿದರೂ. ಕಾಂತಯ್ಯ ಕೋಟಯ್ಯ ಜಗಳವಾಡುವುದನ್ನು ನಿಲ್ಲಿಸಲಿಲ್ಲ. ಸುತ್ತಲೂ ಸೇರಿದ್ದ ಗ್ರಾಮಸ್ಥರಿಗೆ ಏನು ಮಾಡಲೂ ತೋರದು. ಆ ಸಮಯಕ್ಕೆ ಸರಿಯಾಗಿ ಅಲ್ಲಿಗೆ ಮೊಳದುದ್ದ ಬಿಳಿ ಗಡ್ಡದ ಪ್ರಶಾಂತ ವದನವುಳ್ಳ ಓರ್ವ ವೃದ್ಧ ಬಂದ. ಆ ವೃದ್ಧನ ಆಕಾರ, ಮುಖದ ವರ್ಚಸ್ಸು ನೋಡಿ ಕಾಂತಯ್ಯ ಕೋಟಯ್ಯ ಚಕಿತರಾದರು. ಪ್ರಶಾಂತವಾಗಿ ಅರ್ಧನಿಮೀಲಿತ ನಯನಗಳೊಂದಿಗೆ ತಮ್ಮ ಕಡೆಯೇ ನೋಡುತ್ತಿದ್ದ ಆ ವೃದ್ಧನಿಗೆ ಇಬ್ಬರೂ ವಿನಯಪೂರ್ವಕವಾಗಿ ನಮಸ್ಕಾರ ಮಾಡಿ, ತಮ್ಮ ಕಲಹಕ್ಕೆ ಕಾರಣ ಹೇಳಿದರು.

ಆ ವೃದ್ಧನು ಇನ್ನು ಮಾತನಾಡಬೇಡಿರೆಂದು ಇಬ್ಬರಿಗೂ ಸಂಜ್ಞೆ ಮಾಡಿದ. ಕಾಂತಯ್ಯ ಮತ್ತು ಕೋಟಯ್ಯರನ್ನು ಮಾತ್ರವೇ ಅಲ್ಲದೆ ಅಲ್ಲಿ ನೆರೆದಿದ್ದ ಜನರನ್ನೂ ಸಹ ಉದ್ದೇಶಿಸಿ ಹೀಗೆ ಹೇಳಿದ: "ಮನುಷ್ಯರು ಒಬ್ಬರ ಮೇಲೊಬ್ಬರು ಕೋಪಿಸಿಕೊಳ್ಳುವುದು ಹುಂಬತನ. ಜಗಳ ಮತ್ತು ಬಯ್ದಾಡುವಷ್ಟು ದೂರ ಹೋಗುವುದು ತುಂಬಾ ಹೇಯವಾದುದು. ಕಲಹಕ್ಕೆ ಕಾರಣ ನನಗೆ ಹೇಳಬೇಕಾಗಿಲ್ಲ. ಯಾವ ಪರಿಸ್ಥಿತಿಯಲ್ಲೇ ಆಗಲೀ, ಎಷ್ಟೇ ಕಿರುಕುಳಕೊಟ್ಟರೂ ಸಹ ಕೋಪವನ್ನು ಸೂಚಿಸುವುದು ಮಾನವನ ಉತ್ತಮ ಲಕ್ಷಣವಲ್ಲ."

ಕಾಂತಯ್ಯ, ಕೋಟಯ್ಯ ಮಾತ್ರವಲ್ಲದೆ ಅಲ್ಲಿ ಸೇರಿದ್ದ ಜನರೆಲ್ಲಾ ನಿಶ್ಚೇಷ್ಟಿತರಾದರು. ನಾಲ್ಕೈದು ಕ್ಷಣಗಳು ನೀರವತೆಯಿಂದ

ತೆಲುಗಿನಿಂದ

ಕಳೆಯಿತು. ಇಷ್ಟರಲ್ಲಿ ಒಬ್ಬ ಯುವಕ ಆ ಗುಂಪಿನಿಂದ ಮುಂದೆಬಂದು, ವೃದ್ಧನನ್ನು ಸಮೀಪಿಸಿ "ಅಯ್ಯಾ, ಎಂತಹ ಪರಿಸ್ಥಿತಿಯಾದರೂ ಕೋಪಗೊಳ್ಳ ಕೂಡದೆಂದು ನೀವು ಹೇಳಿದಮಾತು, ಮಾನವಮಾತ್ರನಿಗೆ ಸಾಧ್ಯವಿಲ್ಲ" ಎಂದ.

ವೃದ್ಧ ಗಹಗಹಿಸಿ ನಕ್ಕ. ನೀಳವಾದ ಗಡ್ಡವನ್ನು ನೀವುತ್ತಾ "ಏಕೆ ಸಾಧ್ಯವಿಲ್ಲ. ಉದಾಹರಣೆಗೆ ನನ್ನವಿಷಯ ತೆಗೆದುಕೊಳ್ಳಿ. ಯಾರು ಎಷ್ಟೇ ನನ್ನನ್ನು ಚುಚ್ಚಿ ಮಾತನಾಡಲಿ, ನಾನು ಕುಪಿತನಾಗುವುದಿಲ್ಲ. ಅವರಿಗೂ ಶಕ್ತಿಯಿಲ್ಲ. ಮಾನವಮಾತ್ರರೇ ಏಕೆ, ದೇವ ದಾನವರಿಗೂ ಅಷ್ಟೆ" ಎಂದು ಹೇಳಿದ.

ನಡುವೆ ಬಂದು ತಲೆಹರಟೆ ಮಾಡಿದ ಯುವಕನನ್ನು ತೀವ್ರವಾಗಿ ನೋಡಿ, ವೃದ್ಧನಿಗೆ ನೆರೆದಿದ್ದ ಜನರೆಲ್ಲಾ ನಮಸ್ಕಾರಹಾಕಿ, ತಮ್ಮದಾರಿ ತಾವು ಹಿಡಿದರು. ಯುವಕನು ವೃದ್ಧನನ್ನು ಸಮೀಪಿಸಿ 'ತಾತ' ಎಂದ.

'ಏನೂ' ಎಂದ ವೃದ್ಧ ನಗುತ್ತಾ.

'ತಾತ' ಎಂದ ಮತ್ತೆ ಆ ಯುವಕ.

'ಏನೋ ಹೇಳಪ್ಪಾ' ಎಂದ ವೃದ್ಧ; ಈಸರಿ ನಗಲಿಲ್ಲ.

'ತಾತ' ಎಂದ ಯುವಕ.

'ಏನೋ ಹೇಳಬಾರದೆ?' ಎಂದು ಕುಪಿತನಾಗಿ ನುಡಿದ ಮುದುಕಪ್ಪ.

'ತಾತಾ,' ಮತ್ತೆ ಅಂದ ಯುವಕ.

'ಲೋ, ಮೂಢಾ! ನಿನಗೇನಾದರೂ ಹುಚ್ಚೇ' ಎಂದ ಕಣ್ಣುಕೆಂಪಗೆ ಮಾಡಿ ವೃದ್ಧ.

'ತಾತ' ಎಂದ ಮತ್ತೊಂದು ಸಾರಿ ಹುಡುಗ.

'ಎಲೆ ಶುಂಠಾ, ನಿನ್ನ ತಲೆ ಒಡೆಯುತ್ತೇನೆ' ಎಂದು ವೃದ್ಧ ಕೈಎತ್ತಿದ.

ಆಗ ಯುವಕನೂ ನಗುತ್ತಾ 'ಯಾವ ಪರಿಸ್ಥಿತಿಯಲ್ಲೂ ಮನುಷ್ಯನಿಗೆ ಕೋಪ ಬರುಬಾರದು' ಎಂದ.

ಮುದುಕಪ್ಪ ತಲೆ ತಗ್ಗಿಸಿಕೊಂಡುಹಿಂದೆ ತಿರುಗಿ ಸಹ ನೋಡದೆ ಹೊರಟುಬಿಟ್ಟ.

ನೋಡಿದಿರಾ, ಎಷ್ಟೋ ನೀತಿಹೇಳಿದ ಆ ಮಹಾನುಭಾವನೇ ತನ್ನವರೆವಿಗೂ ಬಂದ ಕೂಡಲೇ ಹೇಗೆ ಜಾರಿಕೊಂಡ!





# ತಂದೆಗಾಗಿ

ಅಸ್ಸಾಂದೇಶದಲ್ಲಿ ರಾಂಪುರವೆಂಬ ಪಟ್ಟಣ. ಅದು ವ್ಯಾಪಾರಕ್ಕೆ ತುಂಬಾ ಪ್ರಸಿದ್ಧವಾದ ಸ್ಥಳ. ಆ ಪಟ್ಟಣದಲ್ಲೆಲ್ಲಾ ಗಣ್ಯ ವರ್ತಕ ದುರ್ಗಾಸಿಂಗ್.

ದೇಶವಿದೇಶಗಳಿಂದ ವರ್ತಕರು ಪರಿಪರಿಯಾದ ಸಾಮಾನುಗಳೊಂದಿಗೆ ಆ ಪಟ್ಟಣಕ್ಕೆ ಬರುತ್ತಿದ್ದರು. ದುರ್ಗಾಸಿಂಗ್ ಆ ಪಟ್ಟಣದಲ್ಲೆಲ್ಲಾ ಪ್ರಮುಖ ವರ್ತಕನಾದುದರಿಂದ ಪ್ರತಿಯೊಬ್ಬರೂ ಆತನ ಬಳಿ ಯಾವುದಾದರೊಂದು ವ್ಯಾಪಾರ ಮಾಡದೆ ಹಿಂತಿರುಗುತ್ತಿರಲಿಲ್ಲ.

ಒಂದುದಿನ ಚೈನಾದೇಶದಿಂದ ಮಾಂಗ್ ಎಂಬ ವರ್ತಕ ಆತನ ಮನೆಗೆ ಬಂದ. ಅತಿ ಬೆಲೆಬಾಳುವ ಪೀತಾಂಬರಗಳನ್ನೂ, ಕನ್ನಡಿ, ಮತ್ತು ವಿವಿಧ ಬೊಂಬೆಗಳನ್ನೂ ದುರ್ಗಾಸಿಂಗನಿಗೆ ತೋರಿಸಿ, ಆ ವಸ್ತುಗಳಿಗೆ ಬದಲಾಗಿ ತನಗೆ ಬೇಕಾದ ವಸ್ತುಗಳನ್ನು ದುರ್ಗಾಸಿಂಗನಿಂದ ಪಡೆಯಲು ಒಪ್ಪಿಕೊಂಡ. ಈ ರೀತಿ ವಸ್ತುಗಳನ್ನು ವಿನಿಮಯ ಮಾಡಿಕೊಂಡ ತರುವಾಯ, ತನ್ನ ಕಿಸೆಯಿಂದ ಒಂದು ಗಾಜಿನ ಸೀಸೆ ತೆಗೆದು "ಇದನ್ನು ಹಣಕ್ಕೆ ಮಾತ್ರ ಮಾರುತ್ತೇನೆ. ಇದು ಎಂತಹುದೇ ಗಾಯವಾಗಲೀ, ನೋವಾಗಲೀ, ಕ್ಷಣಮಾತ್ರದಲ್ಲಿ ನಿವಾರಿಸುವುದು" ಎಂದ.

ದುರ್ಗಾಸಿಂಗ್ ಹಣ್ಣು ಹಣ್ಣು ಮುದುಕ. ಬೆನ್ನೆಲುಬು, ಕೀಲುಗಳಿಗೆ ಸಂಬಂಧಿಸಿದ ನೋವಿನಿಂದ ನರಳಾಡುತ್ತಿದ್ದ ಆತ. ಮಾಂಗ್ ಹೇಳಿದ ಬೆಲೆಗೆ ದುರ್ಗಾಸಿಂಗ್ ಆ ಔಷಧಿಯನ್ನು ಕೊಂಡುಕೊಂಡ. ಬಿಳಿಯ ಸೀಸೆಯಲ್ಲಿ ಕೆಂಪಗಿದ್ದ ಆ ದ್ರಾವಕವನ್ನು ಮೈಮೇಲೆ ಹಾಕಿ ತಿಕ್ಕಲು ಎಲ್ಲ ನೋವೂ ಮಾಯವಾಯಿತು. ದುರ್ಗಾಸಿಂಗ್ ಅಮಿತಾನಂದಗೊಂಡ. ಮಾಂಗ್‌ನನ್ನು ಕೇವಲ ವ್ಯಾಪಾರಿ ಎಂದು ಭಾವಿಸದೆ, ತನ್ನ ಮಿತ್ರನೆಂದು ಭಾವಿಸಿ, ತನ್ನ ಮನೆಯಲ್ಲಿ ಕೆಲದಿನ ಉಳಿಸಿಕೊಂಡ.

ಮಾಂಗ್ ಒಂದು ತಿಂಗಳು ಅಲ್ಲೇ ಇದ್ದ. ದುರ್ಗಾಸಿಂಗ್ ಮತ್ತು ಮಾಂಗ್ ಪ್ರಾಣಮಿತ್ರರಾದರು. ದುರ್ಗಾಸಿಂಗನ ಪುತ್ರನಾದ ಪ್ರಸಾದಸಿಂಗನಿಗೆ ಮಾಂಗ್ ತನ್ನ ದೇಶವನ್ನು

ಎನ್. ಎಂ. ಚೌಧುರಿ

ಬಣ್ಣಿಸಿ ಅದೆಷ್ಟೋ ವಿಷಯಗಳನ್ನು ಹೇಳಿದ. ಚೈನಾದೇಶಕ್ಕೆ ಬರಬೇಕೆಂತಲೂ, ಚಾಟುಂಗ್ ಪಟ್ಟಣದಲ್ಲಿರುವ ತನ್ನ ಮನೆಯಲ್ಲಿ ಕೆಲವು ದಿನ ಅತಿಥಿಯಾಗಿರಬೇಕೆಂತಲೂ ತಂದೆ ಮಕ್ಕಳನ್ನು ಆಹ್ವಾನಿಸಿದ.

ಮಾಂಗ್ ಮತ್ತೆ ಚೈನಾದೇಶಕ್ಕೆ ಹೊರಟು ಹೋದ. ದುರ್ಗಾಸಿಂಗನ ಹತ್ತಿರವಿದ್ದ ಕೆಂಪು ದ್ರಾವಕ ಕೆಲವು ದಿನಗಳಲ್ಲೇ ಮುಗಿದು ಹೋಯಿತು. ಮತ್ತೆ ಯಥಾಪ್ರಕಾರ ಬೆನ್ನು ನೋವು ನರಗಳ ಹಿಡಿತದಿಂದ ಬಾಧೆಪಡುತ್ತಾ ಹಾಸಿಗೆ ಹಿಡಿದ. ಹಗಲೂ ರಾತ್ರಿ ವಿಪರೀತ ನೋವಿನಿಂದ ಆತ ಒದ್ದಾಡುತ್ತಿದ್ದ.

ತಂದೆಯ ಸ್ಥಿತಿಯನ್ನು ಕಂಡು ಪ್ರಸಾದ ಸಿಂಗನಿಗೆ ತುಂಬಾ ಸಂಕಟವಾಯಿತು. ಆ ಕೆಂಪು ದ್ರಾವಕ ಸಂಪಾದಿಸಿದರೆ ತಂದೆಯು ಪರಿಸ್ಥಿತಿ ಉತ್ತಮಗೊಳ್ಳುವುದೆಂಬ ಅಂಶ ಆತನಿಗೆ ತಿಳಿದಿದೆ. ಆದರೆ ಅದು ಬೇಕಾದರೆ ಚೈನಾದೇಶಕ್ಕೆ ಹೋಗಬೇಕು.

ಆ ದಿನಗಳಲ್ಲಿ ಒಂದು ದೇಶದಿಂದ ಮತ್ತೊಂದು ದೇಶಕ್ಕೆ ಪ್ರಯಾಣ ಮಾಡಬೇಕೆಂದರೆ ಸುಲಭ ಸಾಧ್ಯವಾದ ಮಾತಾಗಿರಲಿಲ್ಲ. ತುಂಬಾ ಅಪಾಯಕರವಾದ ಕೆಲಸ. ಅಡವಿಗಳೂ, ಕ್ರೂರಮೃಗಗಳೂ, ದರೋಡೆಕಾರರೂ, ಇನ್ನೂ ಎಷ್ಟೋ ಗಂಡಾಂತರಗಳನ್ನು ಎದರುಗೊಳ್ಳಬೇಕಾಗಿತ್ತು. ಆದುದರಿಂದ




ಮಗನು ಚೀನಾದೇಶಕ್ಕೆ ಹೋಗುವೆನೆಂದರೆ ದುರ್ಗಾಸಿಂಗ್ ಬಡಪಟ್ಟಿಗೆ ಒಪ್ಪಲಿಲ್ಲ.

ನಂಬಿಕೆಯುಳ್ಳವರೂ, ಸಾಹಸಿಗಳೂ ಆದ ನಾಲ್ವರು ಸೇವಕರೊಂದಿಗೆ ಪ್ರಸಾದಸಿಂಗನು ಎಲ್ಲ ತೊಂದರೆಗಳಿಂದಲೂ ಪಾರಾಗಿ, ಕೊನೆಗೆ ಚಾಟುಂಗ್ ಪಟ್ಟಣ ಸೇರಿದ.

ಮಾಂಗ್ ಅವನನ್ನು ತುಂಬಾ ಆದರದಿಂದ ಬರಮಾಡಿಕೊಂಡು ಕುಶಲ ಪ್ರಶ್ನೆಗಳನ್ನು ಹಾಕಿದ. ದುರ್ಗಾಸಿಂಗನ ಅವಸ್ಥೆಯನ್ನು ಕೇಳಿ ಮರುಗಿದ. ಪ್ರಸಾದಸಿಂಗ್ ತಾನು ಬಂದ ಕಾರ್ಯವನ್ನು ಕುರಿತು ವಿವರಿಸಿದ.

ಈಗ ತನ್ನ ಹತ್ತಿರ ಆ ಕೆಂಪು ದ್ರಾವಕವು ಸಿದ್ಧವಾಗಿಲ್ಲವೆಂದೂ, ಅಲ್ಲಿಗೆ ಅನತಿ ದೂರದಲ್ಲಿರುವ ಬೆಟ್ಟಗಳಮೇಲೆ ಬೆಳೆಯುವ ಒಂದಾ



ನೊಂದು ಮರದ ಎಲೆಗಳು ಬೇಕೆಂದೂ ಪ್ರಸಾದಸಿಂಗನಿಗೆ ಮಾಂಗನು ಹೇಳಿದ.

ಮಾರನೆಯದಿನ ಪ್ರಾತಃಕಾಲ ಮಾಂಗ್‌ನ ಸೇವಕರನ್ನು ಸಂಗಡ ಕರೆದುಕೊಂಡು ಬೆಟ್ಟದ ಭಿಮುಖವಾಗಿ ನಡೆದ ಪ್ರಸಾದಸಿಂಗ್. ಸಾಯಂಕಾಲವಾಗುವ ವೇಳೆಗೆ ಬೆಟ್ಟದಮೇಲೆ ಆ ಮರಗಳು ಬೆಳೆಯುವ ಸ್ಥಳವನ್ನು ಸೇರಿದರು. ಸೇವಕರು ತಂದ ಗೋಣಿ ಚೀಲಗಳ ತುಂಬಾ ಆ ಎಲೆಗಳನ್ನು ತುಂಬಿದ. ಇನ್ನೇನು ಸೂರ್ಯಾಸ್ತಮಯವಾಗುವ ಸಮಯಕ್ಕೆ ಅವರು ಬೆಟ್ಟದಿಂದ ಇಳಿಯ ಹತ್ತಿದರು.

ಅಗಾಧವಾದ ಸುರಂಗಗಳಿಂದ, ಅಡ್ಡದಿಡ್ಡವಾಗಿ ಬಿದ್ದಿರುವ ಕಲ್ಲುಬಂಡೆಗಳಿಂದ ಆ ಪ್ರದೇಶವೆಲ್ಲಾ ಒತ್ತಿ ಬರುತ್ತಿದ್ದ ಆ ಕತ್ತಲೆಯಲ್ಲಿ ಅತಿ ಭಯಂಕರವಾಗಿತ್ತು. ಸಿಂಹಗಳ ಗರ್ಜನೆ, ಹುಲಿಗಳ ಆರ್ಭಟ, ತೋಳಗಳ ಕಿರುಚಾಟ, ಆಗಾಗ ಅವರಿಗೆ ತುಂಬಾ ಸನಿಯದಿಂದಲೇ ಕೇಳಿಸುತಿತ್ತು. ಭಯದಿಂದ ಕಂಪಿಸುತ್ತ, ಭೀತಿಯಿಂದ ಅತ್ತಿತ್ತ ನೋಡುತ್ತಾ ನೋಡುತ್ತಾ ನಡೆಯುತ್ತಿದ್ದ ಸೇವಕರಿಗೆ ಧೈರ್ಯ ಹೇಳುತ್ತಾ, ಕೈಯಲ್ಲಿದ್ದ ಪಂಜಿನ ಬೆಳಕಿನಿಂದ ಆ ರಾತ್ರಿಯೆಲ್ಲಾ ಅರಣ್ಯಗಳನ್ನು ದಾಟಿ ಹೊರಬಿದ್ದು, ನಡುರಾತ್ರಿಗೆ ಬೆಟ್ಟದಿಂದ ಇಳಿದು, ಸೂರ್ಯೋದಯದ ಹೊತ್ತಿಗೆ ಮಾಂಗನ ಮನೆ ಸೇರಿದ ಪ್ರಸಾದಸಿಂಗ್.

ಆತನು ತಂದ ಎಲೆಗಳೊಂದಿಗೆ ಮಾಂಗ್ ಔಷಧವನ್ನು ಮಾಡುವುದರಲ್ಲಿ ನಿಮಗ್ನನಾದ. ಇಷ್ಟರವರೆವಿಗೂ ಎಲ್ಲ ಕೆಲಸಗಳೂ ಸುಸೂತ್ರವಾಗಿ ನಡೆದುದಕ್ಕೆ ಪ್ರಸಾದಸಿಂಗ್ ಸಂತೋಷಪಟ್ಟ. ಆದರೆ ಒಂದೇ ಒಂದು ಸಂದೇಹ ಆತನನ್ನು ಬಾಧೆಗೊಳಿಸುತಿತ್ತು. "ಈಗ ತೆಗೆದುಕೊಂಡು ಹೋಗುವ ದ್ರಾವಕವೂ ಸಹ ಮುಗಿದು ಹೋದರೆ ಏನು ಮಾಡಬೇಕು? ದೀರ್ಘಾಲೋಚನೆ ಮಾಡಲು ಅವನಿಗೊಂದು ಉಪಾಯ ತೋರಿತು. ಆ ದ್ರಾವಕ ತಯಾರು ಮಾಡುವ ವಿಧಾನ ತಿಳಿದುಕೊಂಡರೆ, ಅದು ತನ್ನ ತಂದೆಗೆ ಮಾತ್ರವೇ ಅಲ್ಲದೆ ಇತರ ರೋಗಿಗಳಿಗೂ ಉಪಯೋಗವಾಗುವುದು. ಕೆಲವು ದಿನಗಳಲ್ಲೇ ಯಥೇಚ್ಛವಾಗಿ ಹಣ ಸಂಪಾದಿಸಬಹುದು!

“ಈ ದ್ರಾವಕ ತಯಾರುಮಾಡುವವಿಧಾನ ನನಗೆ ಹೇಳಿಕೊಡಿ” ಎಂದು ಮಾಂಗ್‌ನನ್ನು ಕೇಳಿದ ಪ್ರಸಾದಸಿಂಗ್. ಆ ಮಾತು ಕೇಳಿ ಮಾಂಗ್ ಒಂದು ನಿಟ್ಟುಸಿರನ್ನು ಬಿಟ್ಟು, ಗಂಟಲು ಸರಿಮಾಡಿಕೊಂಡು ಮೆಲ್ಲನೆ ಈರೀತಿ ಹೇಳಿದ.

“ಈ ಔಷಧಿ ಮಾಡುವ ವಿಧಾನವನ್ನು ಅತಿ ಕಷ್ಟಪಟ್ಟು ಕಲಿತುಕೊಂಡೆ. ನನ್ನ ಅನಂತರ ಒಬ್ಬ ಮಗನಿದಾನೆ. ಇದರ ರಹಸ್ಯವನ್ನು ಅವನಿಗೆ ಹೇಳಿ ಹೋಗಬೇಕೆಂದಿದ್ದೆ. ಆದರೆ ಅವನು ಸೈನ್ಯಕ್ಕೆ ಸೇರಿಬಿಟ್ಟ. ಮತ್ತೆ ಬರ ಬಹುದು; ಬಾರದಿರಲೂ ಬಹುದು.” ಮಾಂಗ್ ಕಂಠ ಗದ್ಗದವಾಯಿತು. ಕಣ್ಣೀರು ಒರಸಿಕೊಂಡು ಮತ್ತೆ ಪ್ರಾರಂಭಿಸಿದ :

“ನನಗೊಬ್ಬ ಮಗಳಿದ್ದಾಳೆ. ಅವಳೇ ನನಗೆ ಸರ್ವಸ್ವ. ನೀನು ನನ್ನ ಪ್ರಾಣಮಿತ್ರನ ಮಗನಾದುದರಿಂದ, ಧೈರ್ಯಸಾಹಸಿಯೂ ಅಲ್ಲದೆ ಸುಗುಣಸಂಪನ್ನನೂ ಆದಪ್ರಯುಕ್ತ ಆ ನನ್ನ ಮಗಳನ್ನು ಮದುವೆಯಾದರೆ ನಾನು ನಿನಗೆ ಈ ರಹಸ್ಯವನ್ನು ತಿಳಿಸುವೆನು” ಎಂದ.

ಮಾಂಗ್ ‘ ರಿಂಗ್‌ಲಿಂಗ್ ’ ಎಂದು ಒಂದು ಸಾರಿ ಕೂಗಿದ. ಪಕ್ಕದ ಕೋಣೆಯ ಬಾಗಿಲನ್ನು ತಳ್ಳಿಕೊಂಡು ಹದಿನೈದು ವರ್ಷದ ಯುವತಿಯೊಬ್ಬಳು ಇಣಿಕಿ ನೋಡಿದಳು. “ಇವಳೇ ನನ್ನ ಮಗಳು” ಎಂದು ಮಾಂಗ್ ಪ್ರಸಾದಸಿಂಗನಿಗೆ ತೋರಿಸಿ ಅವನನ್ನು ದೃಷ್ಟಿಸಿ ನೋಡಿದ.



ಪ್ರಸಾದಸಿಂಗನ ಮೈಕಂಪಿಸಿತು. ಮುಖ ವಿವರ್ಣವಾಯಿತು. ಸಿಡುಬಿನ ಕಲೆಗಳಿಂದ, ಗಾಜಿನ ಕಣ್ಣುಗಳಂತೆ ಬೆಳಕು ಕತ್ತಲುಗಳನ್ನು ಗಮನಿಸುವ ಜೀವರಹಿತವಾದ ಕಣ್ಣು ಗುಡ್ಡೆಗಳಿಂದ ಕೂಡಿರುವ ರಿಂಗ್‌ಲಿಂಗ್ ರೂಪವನ್ನು ನೋಡಿ ಒಂದು ವಿಧವಾದ ಭಯವಾಯಿತು.

“ಹೆತ್ತ ತಂದೆಯ ಋಣ ತೀರಿಸಿದವನಾಗುವೆ. ಕೆಲ ದಿನಗಳಲ್ಲೇ ಕೋಟೀಶ್ವರನಾಗುವೆ, ಯೋಚಿಸು” ಎಂದು ಮಾಂಗ್ ಉಪನ್ಯಾಸಧೋರಣೆಯಲ್ಲಿ ಹೇಳುತ್ತಿದ್ದ.

ಪ್ರಸಾದಸಿಂಗ್ ನಿದ್ದೆಯಿಂದ ಎಚ್ಚೆತ್ತವನಂತೆ ‘ ಸರಿ ’ ಎಂದ.

ರಿಂಗ್‌ಲಿಂಗ್ ಳೊಂದಿಗೆ ಪ್ರಸಾದಸಿಂಗನ

ಮದುವೆ ವಿಜೃಂಭಣೆಯಿಂದ ನಡೆಯಿತು. ನೂಂಗ್ ಅಳಿಯನಿಗೆ ಕೆಂಪು ದ್ರಾವಕ ಮಾಡುವ ವಿಧಾನ ಹೇಳಿದ. ಹತ್ತು ಜನ ಸೇವಕರನ್ನು ಸಹಾಯಕ್ಕೆ ಕೊಟ್ಟು, ಅಳಿಯನನ್ನು ಮಗಳನ್ನೂ ಅವರ ದೇಶಕ್ಕೆ ಕಳುಹಿಸಿ ಕೊಟ್ಟ.

ಪ್ರಸಾದಸಿಂಗನು ಹಾಗೂ ಹೀಗೂ ಆರು ತಿಂಗಳಿಗೆ ತನ್ನ ಮನೆ ಸೇರಿದ. ಅವನು ಮನೆ ಪ್ರವೇಶಿಸಿದಾಗ ಮನೆ ಭೋ ಎನ್ನುತ್ತಿತ್ತು. ಒಂದು ಮೂಲೆಯಲ್ಲಿ ಮುದಿ ನೌಕರನೊಬ್ಬನು ಕುಳಿತುಕೊಂಡು ಏನೋ ಗೊಣಗುತ್ತಿದ್ದ. ಮರು ನಿಮಿಷದಲ್ಲಿ ಆತನು ಎಲ್ಲ ವಿಷಯವನ್ನು ಪ್ರಸಾದಸಿಂಗನಿಗೆ ತಿಳಿಸಿದ. ತಂದೆ ದುರ್ಗಾಸಿಂಗನು ಕಾಲವಾಗಿ ಸುಮಾರು ಆರು ತಿಂಗಳಾಗಿದ್ದುವು. ಕಡೆಗಾಲದಲ್ಲೂ ಸಹ ಆತನು ಮಗನನ್ನು ಕುರಿತು ಕೇಳುತ್ತಿದ್ದನಂತೆ.

ಪ್ರಸಾದಸಿಂಗನ ಹೃದಯ ದಹಿಸಿತು. ತೀರಾ ಅಷ್ಟು ಕಷ್ಟಪಟ್ಟು ತಾನು ತಂದ ಔಷಧ ತಂದೆಗೆ ಉಪಯೋಗವಾಗಲಿಲ್ಲವಲ್ಲಾ ಎಂಬುದೇ ಅವನ ಚಿಂತೆ. ಈ ರಹಸ್ಯ ತಿಳಿಯಲು ಕುರೂಪಿಯೂ, ಅಂಧಳೂ ಆದ ಸ್ತ್ರೀಯನ್ನೂ ಸಹ ವಿವಾಹವಾದ. ಇದೆಲ್ಲಾ ಯಾರಿಗಾಗಿ? ತಂದೆಗಾಗಿ ಯಲ್ಲವೇ? ಆದರೆ ಈಗ ಎಲ್ಲವೂ ಬೂದಿಯಲ್ಲಿ ಎರಚಿದ ಪನ್ನೀರಿನಂತೆ ಆಯಿತು.

ಶರೀರಕ್ಕೆ ಆದ ಗಾಯಗಳನ್ನು ಔಷಧಿ ಗುಣಪಡಿಸುವಂತೆ, ಮನಸ್ಸಿಗೆ ಆದ ಗಾಯವನ್ನು ಅನುಕೂಲವಾದ ಕಾಲ ಗುಣಪಡಿಸುವುದು. ಪ್ರಸಾದಸಿಂಗನು ಕ್ರಮೇಣ ದುಃಖವನ್ನು ನುಂಗಿಕೊಂಡು, ತನ್ನ ತಂದೆಗೆ ಉಪಯೋಗಿಸಲಾಗದ ದ್ರಾವಕವನ್ನು ದೇಶದಲ್ಲಿದ್ದ ಅನೇಕಮಂದಿ ವ್ಯಾಧಿಗ್ರಸ್ತರ ಮೇಲ್ಮೆಗಾಗಿ ಉಪಯೋಗಿಸಿ, ಕೆಲವು ದಿನಗಳಲ್ಲೇ ಐಶ್ವರ್ಯವಂತನಾದ.

ತನ್ನ ಯೌವನವನ್ನೆಲ್ಲಾ ರಿಂಗ್‌ಲಿಂಗ್ ಳನ್ನು ಅಸಹ್ಯದಿಂದ ಕಾಣುವುದರಲ್ಲೇ ಕಳೆದನಾದರೂ, ವೃದ್ಧಾಪ್ಯದಲ್ಲಿ ಹಣದ ದೆಸೆಯಿಂದಾದ ಸೌಖ್ಯದಿಂದ, ಅದಕ್ಕೆ ಕಾರಣಳಾದ ಹೆಂಡತಿ ರಿಂಗ್‌ಲಿಂಗ್ ಅಂದರೆ ಪ್ರಸಾದಸಿಂಗನಿಗೆ ಎಲ್ಲಿಲ್ಲದ ಪ್ರೇಮ ಅನುರಾಗವೇರ್ಪಟ್ಟಿತು. ಅವರು ತಮ್ಮ ಉಳಿದ ಜೀವಮಾನವನ್ನು ಸುಖ ಸಂತೋಷಗಳಿಂದ ಕಳೆದರು.



## ಭಟ್ಟರ ಗಡಿಬಿಡಿ

ರಾಮಣ್ಣ ಭಟ್ಟರು ಒಂದಿನದಲ್ಲಿ
ರಾಯರ ಲಗ್ನಕೆ ತೆರಳಿದರು.
ದಡಬಡ ಮಂತ್ರದಿ ಲಗ್ನವ ಮುಗಿಸಿ
ಘನಭೋಜನವನು ಮಾಡಿದರು

ಊಟವ ಮುಗಿಸಿ ಹಿಂದಕೆ ಬರುತಿರೆ—
ಸೊಂಟದಿ ಕಂಡಿತು ಮಂಗಲಸೂತ್ರ!
ಅತಿಯಚ್ಚರಿಯಂ ಗೊಂಡವರಾಗಿ,
ಮರುಗಿದರಾಗಲೆ-ದುಗುಡದಲಿ

"ವಧುವಿನ ಕೊರಳೊಳು ಶೋಭಿಪಮಾಲಾ
ನನ್ನೀವಶದಲೆ ನಿಂತಿತೆ? ಅಯ್ಯೊ!
ಅವಸರ ಮಾಡಿದೆ-ಕೆಟ್ಟೇ ಹೋದೆ!"—
ಎನ್ನುತ ರಾತ್ರಿ ಹಿಂದೋಡಿದರು

ಅಂದಾರಾಯರ ವಿಧವಾ ತಾಯಿಯು
'ನವವಧು' ವೊಂದಿಗೆ ಮಲಗಿರಲು-
ಭಟ್ಟರು ಓಡಿ ಅವಸರದಿಂದಲಿ—
ಇಟ್ಟರು ಸೂತ್ರವ ಕೊರಳೊಳಗೆ

ಮರುದಿನ ರಾಯರು ಬೇಗನೆ ಎದ್ದು
ತಾಯಿಯ ಪಾದಕೆ ವಂದಿಸುತಿರಲು,
ಕತ್ತನು ನೋಡಿ, ಹಿರಿಯಚ್ಚರಿಯಿಂ
'ಏನಿದು ಅಮ್ಮಂ'ದಾಡಿದರು!

ಎಂದಾ ಮಾತನು ಕೇಳುತ ಮುದುಕಿ,
ವಧುವಿನ ಕೊರಳನು ನೋಡಿದರು—
ಸೂತ್ರವಕಾಣದೆ-ಗಾಬರಿಗೊಂಡು,
ಮಂಕಾದರು--ಕಾರಣವಳಿದು!

ಮರುದಿನ ಭಟ್ಟರ ಸತಿಯಿಂದೆಲ್ಲಾ
'ಸಂಗತಿ'ಯದು ಬಯಲಾಗುತಿರೆ,
"ಹೊ! ಹೊ! ಭಟ್ಟರ ಗಡಿಬಿಡಿ" ಯೆಂದು
ನಕ್ಕರು ಭಟ್ಟರ ಗುಟ್ಟರಿದು!!

—ಲೇ: ಸೀತಾರಾಮ ಆಚಾರ್ಯ, ಹೊಸಬೆಟ್ಟು.

## ಬಣ್ಣದ ಬೀಸಣಿಕೆ

ಬಣ್ಣ ಬಣ್ಣದಿಂ ಮೆರೆಯುತಲಿರುವೆ
ಬಣ್ಣದ ಬೀಸಣಿಕೆಯೆ ನೀನು
ತಣ್ಣನ ಗಾಳಿಯ ನುಣ್ಣಗೆ ಬೀಸುತ
ದಣಿದಾಯಾಸವ ಕಳೆಯುವೆ ನೀನು

ಸಿರಿತನ ದೊರೆತನ ಬಡತನವಿರಲಿ
ಇರುತಿಹೆ ಎಲ್ಲರ ಬಳಿಯಲಿ ನೀನು
ಹರುಷದಿ ಜನತೆಯು ಕಾಲವ ಕಳೆಯಲು
ನಿರುತವು ದಣಿಯುವೆ ಮಣಿಯುವೆ ನೀನು

ಚೌಕಾಕಾರದ ದೇಹವು ಕಿರಿದು
ಎಸಗುವ ಕಾರ್ಯವು ನಿನ್ನದೆ ಹಿರಿದು
ಫಲಕಾಶಿಸದೆ ದುಡಿಯುವೆ ಸತತ
ಒಡೆಯನ ಸೇವೆಯ ಮಾಡುವೆ ನಿರತ

ಮೂಕನಾಗಿಯೆ ಸೇವೆಯ ಮಾಡುತ
ಕಿಂಕರ ಭಾವವ ಬೀರುವೆ ಏನು
ತನುವನು ಮನವನು ಸೇವೆಗೆ ನೀಡುತ
ಸೇವೆಯೆ ಸಗ್ಗವು ಎನುತಿಹೆ ಏನು?

—ಹನುಮಂತ ಯಮನಪ್ಪ ಜಲ್ಲಿ.

## ಚೀಂ ಚೀಂ ಹಕ್ಕಿ

ಚೀಂ ಚೀಂ ಹಕ್ಕಿ
ಎಲ್ಲಿಗೆ ಹೊರಟೆ?
ತಾತನು ತರುವ
ಮಿಠಾಯಿ ಕೊಡುವೆ
ಅಮ್ಮನು ಕೊಡುವ
ತಿಂಡಿಯ ಕೊಡುವೆ
ಎನಗೂ ಹಾರಲು
ಕಲಿಸುವಿಯೇನು?
ಎನಗೂ ಹಾಡಲು
ತಿಳಿಸುವಿಯೇನು?

—"ಹ. ರಾ. ಕಿ."




## ಮಾಯಾ ಲೋಟ

ಈ ತಮಾಷೆ ನೋಡಿ. ಅದು ಮರದ ಪೆಟ್ಟಿಗೆ ಯಾದರೂ ಆಗಬಹುದು; ಇಲ್ಲ ರಟ್ಟಿನ ಪೆಟ್ಟಿಗೆ ಯಾದರೂ ಆಗಬಹುದು; ಅದಕ್ಕೆ ಒಂದು ಮುಚ್ಚಳವಿದೆ. ಪೆಟ್ಟಿಗೆಯ ಪಕ್ಕದಲ್ಲಿ ಒಂದು ಲೋಟ ಇದೆ. ಅದರಲ್ಲಿ ಬಟಾಣಿ ಇದೆ.

ಮಂತ್ರಗಾರನು ಆ ಪೆಟ್ಟಿಗೆಯಲ್ಲಿರುವ ಬಟಾಣಿ ತೆಗೆದು ಅದನ್ನು ಲೋಟಾದಲ್ಲಿ ತುಂಬಿಸುವನು. ಪಕ್ಕದಲ್ಲಿರುವ ಚಿತ್ರನೋಡಿ, ತಿಳಿಯುತ್ತೆ. ಮತ್ತೆ ಎಲ್ಲರ ಎದುರಿಗೆ ಆ ಲೋಟಾದಲ್ಲಿರುವ ಬಟಾಣಿಯನ್ನೆಲ್ಲಾ ಆ ಪೆಟ್ಟಿಗೆಯೊಳಗೆ ಸುರಿಯುತ್ತಾನೆ. ತರುವಾಯ ಆ ಲೋಟಾ ಆ ಪೆಟ್ಟಿಗೆಯಲ್ಲಿಟ್ಟು ಮತ್ತೆ ಬಟಾಣಿಯೊಂದಿಗೆ ಅದನ್ನು ತುಂಬಿ ಪ್ರೇಕ್ಷಕರ ಹತ್ತಿರಕ್ಕೆ ತರುತ್ತಾನೆ. ಪ್ರೇಕ್ಷಕನ ಹತ್ತಿರ ದಿಂದ ಕೈಚೌಕವೊಂದನ್ನು ತೆಗೆದುಕೊಂಡು ಅದರ ಮೇಲೆ ಮುಚ್ಚುತ್ತಾನೆ. ಮರು ಕ್ಷಣ ದಲ್ಲಿ ಆ ಬಟ್ಟೆಯನ್ನು ತೆಗೆದು ಬಿಟ್ಟ ಕೂಡಲೇ ಅದರಲ್ಲಿ ಚಾಕಲೇಟುಗಳೂ, ಪೆಪ್ಪರಮಿಂಟ್, ಮುಂತಾದುವು ಇರುತ್ತವೆ. ಅವುಗಳನ್ನು ಅಲ್ಲಿ ಸೇರಿರುವ ಹುಡುಗರಿಗೆ ಹಂಚಿದರೆ ಅವರು ಅದನ್ನು ಬಾಯಿಯಲ್ಲಿ ಹಾಕಿಕೊಂಡು, ಬಹಳ ಮೆಚ್ಚಿಕೊಂಡು ಮನೆಗೆ ತೆರಳುವರು.

ಒಂದೇ ರೀತಿಯಿರುವ ಎರಡು ಲೋಟಾಗಳು ಈ ಗಾರಡಿಗೆ ಅತ್ಯವಶ್ಯಕ.



ಒಂದುಲೋಟಾದಲ್ಲಿ ಚಾಕಲೇಟ್, ಪೆಪ್ಪರ ಮಿಂಟ್‌ನಿಂದ ತುಂಬಿ, ಮೇಲೆ ಮಾತ್ರ ಒಂ ದಿಷ್ಟು ಬಟಾಣಿ ( ಅಥವಾ ನೀವು ಏನು ಉಪ ಯೋಗಿಸಲು ಸಿದ್ಧರಿರುವಿರೋ ಅದನ್ನು ) ತುಂ

ಬಿ ಮೊದಲೇ ಆ ಪೆಟ್ಟಿಗೆಯಲ್ಲಿಟ್ಟಿರಬೇಕು ಪ್ರೇಕ್ಷಕರಿಗೆ ಈ ವಿಷಯ ತಿಳಿಯದು. ಅದ ರಿಂದ ಅವರು ಅನುಮಾನ ಪಡುವುದಿಲ್ಲ.

ಎರಡನೇ ಸಾರಿ ಮತ್ತೆ ಬಟಾಣಿಯನ್ನು ಲೋಟಾದಲ್ಲಿ ಹಾಕಿದಾಗ ಚಾಕಚಕ್ಯತೆಯಿಂದ ಈ ಲೋಟಾ ಪೆಟ್ಟಿಗೆಯಲ್ಲಿಟ್ಟು, ಈ ಮೊದಲೇ ಇಟ್ಟಿರುವ ಬೇರೊಂದು ಲೋಟಾವನ್ನು ಪ್ರೇಕ್ಷ ಕರ ಹತ್ತಿರ ತರಬೇಕು. ಈ ಲೋಟಾ ಬದ ಲಾಯಿಸುವುದು ಕಷ್ಟವೆಂದು ತೋರಬಹುದು ಆದರೆ ನಿಜವಾಗಿ ಅದೇನಷ್ಟು ಕಷ್ಟವಲ್ಲ. ಮೊದಲು ಪ್ರೇಕ್ಷಕರ ಎದುರಾಗಿಯೇ ಲೋಟಾ




ದಲ್ಲಿ ಬಟಾಣಿ ಸುರಿಯುವಿರಾದುದರಿಂದ ಈ ಲೋಟಾದಲ್ಲಿ ಮಾಯಮಂತ್ರವೇನಿಲ್ಲ; ಅದು ಸಾಮಾನ್ಯವಾದ ಲೋಟಾ ಎಂದು ತಿಳಿಯು ತ್ತಾರೆ. ಎರಡನೇ ಸಾರಿ ಈ ಲೋಟಾ ಪೆಟ್ಟಿಗೆ ಯಲ್ಲಿಟ್ಟು ಮತ್ತೆ ಬಟಾಣಿಯಿಂದ ತುಂಬಿಸು ವಾಗ ಮಾತ್ರ ಇದನ್ನು ಅಲ್ಲೇ ಇರಿಸಿ ಚಾಕ ಲೇಟಿನಿಂದ ಸಿದ್ಧ ಪಡಿಸಿಕೊಂಡಿದ್ದ ಲೋಟ ಪ್ರೇಕ್ಷಕರ ಹತ್ತಿರ ತೆಗೆದುಕೊಂಡು ಬರಬೇಕು. ಅದರ ಮೇಲೂ ಸಹ ಮೇಲೆ ನವುರಾದ ಕಾಗದ ಹಾಕಿ ಬಟಾಣಿ ಮೇಲೆ ಹಾಕಿರುವುದರಿಂದ ಅದು ತಾವು ಈ ಮೊದಲು ನೋಡಿದ ಲೋಟಾವೇ ಇರಬೇಕೆಂದು ಭ್ರಮಿಸುವರು ಸಭಿಕರು. ಈ ಎರಡು ಲೋಟಾಗಳು ಪೆಟ್ಟಿಗೆ ಯಲ್ಲಿರುವ ರೀತಿ ಎರಡನೇ ಚಿತ್ರದಲ್ಲಿ ನೋಡ ಬಹುದು. ಈ ಗಮ್ಮತ್ತು ಮಾಡಿ ತೋರಿಸು ವಾಗ ಬಟಾಣಿಯೇ ಇರಬೇಕು ಎಂಬ ರೂಲೇನೂ ಇಲ್ಲ. ತಮ್ಮಿಷ್ಟಬಂದ ವಸ್ತು ಗಳನ್ನು ಆರಿಸಿಕೊಳ್ಳಬಹುದು.

ಆದರೆ ಈ ಗಮ್ಮತ್ತು ಮಾಡಬೇಕೆಂದರೆ ಇದಕ್ಕೆ ಅಗತ್ಯವಾದ ಏರ್ಪಾಟುಗಳನ್ನೆಲ್ಲಾ ಮೊದಲೇ ಸಿದ್ಧ ಪಡಿಸಿಟ್ಟುಕೊಳ್ಳಬೇಕು. ಈ ಗಾರಡಿ ಯಾವಾಗಲೋ ಒಂದು ಸಾರಿ ಮಾಡ ಬೇಕೇ ಹೊರತು, ಪ್ರೇಕ್ಷಕರಿಗೆ ಅಡಿಗಡಿಗೆ ತೋರಿಸಕೂಡದು

### ಹಾಂಗ್‌ಕಾಂಗ್‌ನಲ್ಲಿ ಚಂದಮಾಮ

ಏಷ್ಯಾದೇಶಗಳಲ್ಲಿ ಈಗ ಸಂಚರಿಸು ತ್ತಿರುವ ನಮ್ಮ ಸರ್ಕಾರರು ಚಂದಮಾಮ ಗಳನ್ನು ಹಾಂಗ್‌ಕಾಂಗಿನಲ್ಲಿ ನೋಡಿ,ಅಲ್ಲಿಂದ ಉತ್ಸಾಹಪೂರಿತ ಪತ್ರ ಬರೆದಿದ್ದಾರೆ. ಚೀನೀ ಯರು ಸರ್ಕಾರರ ಪ್ರದರ್ಶನಗಳಿಗೆ ಕಿಕ್ಕಿರಿದು ತುಂಬಿ, ನೋಡಿ ಮೆಚ್ಚಿ ಆನಂದಪಡುತ್ತಿದ್ದಾ ರಂತೆ. ಎಲ್ಲಿ ಸರ್ಕಾರರೋ ಅಲ್ಲಿ ಚಂದಮಾಮ ಎಂದು ಎಂದೋ ಹೇಳಿಲ್ಲವೆ!

# ಮುಖಚಿತ್ರ

**ಸು**ದಾಮ ಒಬ್ಬ ತೀರ ಬಡಬ್ರಾಹ್ಮಣ. ಉಡಲು ತೊಡಲು ಬಟ್ಟೆಗೆಕೂಡ ಗತಿಯಿಲ್ಲದೆ ಹರಕು ಚಿಂದಿಗಳನ್ನೇ ಧರಿಸುವನು. ಆದುದರಿಂದ ಆತನಿಗೆ ಕುಚೇಲನೆಂಬ ಹೆಸರು ಬಂದಿತು. ಆತ ಜಿತೇಂದ್ರಿಯ. ಇದ್ದುದರಲ್ಲಿ ತೃಪ್ತಿಹೊಂದುವಂತಹ ಹಿರಿಯ ಗುಣವುಳ್ಳವ. ಆದರೆ ಆತನ ದಾರಿದ್ರ್ಯಕ್ಕೆ ಜೊತೆಯಾಗಿ ಮನೆ ತುಂಬ ಮಕ್ಕಳು ಬೇರೆ. ಇವರನ್ನೆಲ್ಲಾ ಸಲಹಿ ಸಂಸಾರ ನಿರ್ವಹಿಸುವುದು ಅತಿ ದುರ್ಘಟವಾಗಿತ್ತು.

ಕುಚೇಲನೂ ಶ್ರೀಕೃಷ್ಣನೂ ಚಿಕ್ಕಂದಿನ ಸಹಪಾಠಿಗಳು, ಬಾಲ್ಯಮಿತ್ರರು. ಬಡತನದ ಬೇಗೆ ಸಹಿಸಲಾರದೆ ಒಂದು ದಿನ ಕುಚೇಲನ ಭಾರ್ಯೆಯು ಪತಿಯೊಡನೆ "ನಾಥಾ! ಆ ಸಾಕ್ಷಾತ್ ಲಕ್ಷ್ಮೀಪತಿಯಾದ ಶ್ರೀಕೃಷ್ಣನು ನಿನ್ನ ಸಖನೇ ಅಲ್ಲವೆ? ಆತನು ಶರಣಾಗತ ರಕ್ಷಕನೆಂಬ ಬಿರುದಾಂಕಿತನಲ್ಲವೆ? ಒಂದುಸಾರಿ ಆ ಮಹಾನುಭಾವನ ದರ್ಶನ ಮಾಡಿ ಬರಬಾರದೆ? ಆತ ನೆನೆಸಿದನಂದರೆ ನಮ್ಮ ದಾರಿದ್ರ್ಯ ಹೇಳ ಹೆಸರಿಲ್ಲದಂತೆ ಹೋಗುವುದು" ಎಂದು ವಿನಯಪೂರ್ವಕ ಕೋರಿಕೊಂಡಳು. ಈ ನೆಪದಲ್ಲಾದರೂ ಆ ದೇವದೇವನ ಸಂದರ್ಶನ ಭಾಗ್ಯ ದೊರಕುವುದಲ್ಲಾ ಎಂದು ಕುಚೇಲನು ಒಪ್ಪಿದನು—ಆದರೆ ಅಂತಹವರನ್ನು ನೋಡಲು ಬರಿಕೈಯಲ್ಲಿ ಹೋಗಬಾರದಲ್ಲವೆ! ತಿನ್ನಲು ಕೂಡ ಗತಿಯಿಲ್ಲದ ನಾವು ಏನು ಕೊಡಬಲ್ಲೆವು? ಎಂದು ಚಿಂತೆಯುಂಟಾಯಿತು. ಕಡೆಗೆ ಆಕೆ ನಾಲ್ಕು ಮನೆಗಳಲ್ಲಿ ಭಿಕ್ಷ ಬೇಡಿ ನಾಲ್ಕು ಹಿಡಿ ಅವಲಕ್ಕಿ ತಂದು ಜಾಗ್ರತೆಯಿಂದ ಅದನ್ನು ಕುಚೇಲನ ವಸ್ತ್ರದಲ್ಲಿ ಕಟ್ಟಿಕೊಟ್ಟಳು.

ಕುಚೇಲನು ಆ ಗಂಟಿನೊಡನೆ ಹೊರಟು ದ್ವಾರಕಾಪುರಿಯನ್ನು ಸೇರಿಕೊಂಡನು. ಅರಮನೆದ್ವಾರಕ್ಕೆ ಬರುವಾಗ ಕೃಷ್ಣನು ಥಟ್ಟನೆ ಹೋಗಿ ತನ್ನ ಬಾಲ್ಯಮಿತ್ರನನ್ನು ಎದುರುಗೊಂಡು ತನ್ನ ಪಕ್ಕದಲ್ಲೇ ಶಯ್ಯೆಯ ಮೇಲೆ ಕುಳ್ಳಿರಿಸಿಕೊಂಡನು. ಆದರಾಭಿಮಾನದಿಂದ ಕಾಲು ತೊಳೆದು ಉಪಚರಿಸಿ ಕಾಲೊತ್ತುತ್ತಾ ಕುಶಲಪ್ರಶ್ನೆಗಳನ್ನು ನಡೆಸಿದನು. ರುಕ್ಮಿಣಿಯು ಗಾಳಿ ಬೀಸಿ ಉಪಚರಿಸಿದಳು. ನಂತರ ಚಿಕ್ಕಂದಿನ ಚೆಲ್ಲಾಟಗಳನ್ನೂ, ಓದುತ್ತಿದ್ದಾಗಿನ ಹಾಸ್ಯಚೇಷ್ಟೆ ಇತ್ಯಾದಿಗಳೆಲ್ಲವನ್ನೂ ಜ್ಞಾಪಿಸಿಕೊಂಡು ನಕ್ಕು ಸರಸಸಲ್ಲಾಪಗಳಲ್ಲಿ ಕಾಲತಳ್ಳಿದರು. ಕಡೆಗೆ ಕೃಷ್ಣನು "ಏನಯ್ಯಾ ಸುದಾಮಾ, ನನಗಾಗಿ ಏನು ತಂದಿರುವೆ?" ಎನ್ನುತ್ತಾ ಆತನ ಬಟ್ಟೆಯನ್ನು ಶೋಧಿಸಿ ಸಂಕೋಚದಿಂದ ಬಚ್ಚಿಟ್ಟುಕೊಂಡಿದ್ದ ಅವಲಕ್ಕಿಗಂಟನ್ನು ತಾನೇ ಬಿಚ್ಚಿ ಅವಲಕ್ಕಿ ಬಾಯಿಗೆ ಹಾಕಿಕೊಂಡನು. ಇದನ್ನು ಕಂಡು ಎಲ್ಲರೂ ಆಶ್ಚರ್ಯ ಚಕಿತರಾದರು.

ಸಂತೋಷದಿಂದ ಕಾಲಕಳೆದು ಮರುದಿನ ಕುಚೇಲನು ಊರಿಗೆ ಹಿಂತಿರುಗಿದನು. ಅವನಿಗೆ ತನ್ನ ಬಡತನವನ್ನು ಕೃಷ್ಣನಿಗೆ ತಿಳಿಸಲು ಬಾಯಿ ಬರಲಿಲ್ಲ. ಅಂತೂ ಕೃಷ್ಣ ದರ್ಶನವೇ ಮಹಾಭಾಗ್ಯವೆಂದು ನೆನೆಸುತ್ತಾ ಊರು ಸೇರಿದರೆ ಅಲ್ಲೇನು ನೋಡುತ್ತಾನೆ? ತನ್ನ ಗುಡಿಸಲು ಇದ್ದ ಸ್ಥಳದಲ್ಲಿ ಸಕಲ ಭೋಗಭಾಗ್ಯಗಳಿಂದ ತುಂಬಿದ ಭವ್ಯ ಅರಮನೆ ನಿಂತಿದೆ. ಸಕಲಾಭರಣಗಳಿಂದ ಕೂಡಿದ ತನ್ನ ಪತ್ನಿಯು ಸೇವಿಕೆಯರೊಡನೆ ತನ್ನನ್ನು ಸ್ವಾಗತಿಸುತ್ತಿದ್ದಾಳೆ. ಕುಚೇಲ ತನ್ನ ಕಣ್ಣನ್ನೇ ನಂಬಲಾಗಲಿಲ್ಲ. ಇದಕ್ಕೆಲ್ಲಾ ಶ್ರೀಕೃಷ್ಣನ ಮಹಿಮೆಯೇ ಕಾರಣವೆಂದು ತಿಳಿದು ಸಂತೋಷದಿಂದ ಕಾಲ ಕಳೆಯತೊಡಗಿದನು. ಆದರೆ ಇಷ್ಟು ಐಶ್ವರ್ಯ ಬಂದರೂ ಕಾರಣನಾದ ಭಗವಂತನನ್ನು ಮರೆಯದೆ ಸದಾ ಕೃಷ್ಣ ಧ್ಯಾನದಲ್ಲಿ ನಿರತನಾದನು.

# ಬಣ್ಣದ ಚಿತ್ರ ಕಥೆ—ಚಿತ್ರ - 4

ಉದ್ಯಾನವನದಲ್ಲಿ ನಡೆದ ವಿಚಿತ್ರ ವಿಷಯವನ್ನೇ ನೆನೆಸುತ್ತಾ ಶಾನ್‌ಮಿಂಗ್ ಮನೆ ಸೇರಿಕೊಂಡಳು, ಅಲ್ಲವೆ ? ಆದರೆ ಈ ವಿಷಯವನ್ನು ಮಾತ್ರ ತಂದೆ ತಾಯಿಗೆ ತಿಳಿಸಲೇ ಇಲ್ಲ. ಹೇಳಿದರೆ ಏನೋ, ಬಿಟ್ಟರೆ ಏನೋ—ಎಂಬ ಸಂದೇಹದಿಂದ ಸುಮ್ಮನಿದ್ದುಬಿಟ್ಟಳು. ಆ ರಾತ್ರಿಯೆಲ್ಲಾ ತನ್ನ ಕೋಣೆಯಲ್ಲಿ ಕುಳಿತು ಈ ವಿಚಾರವನ್ನೇ ಆಲೋಚಿಸ ತೊಡಗಿದಳು— 'ಇದಕ್ಕೆ ಕಾರಣವೇನಿರಬಹುದು ?'—ಎಂಬ ಈ ಮಾತುಗಳು ಆಲೋಚನೆಯ ಸಮಯದಲ್ಲಿ ತಾವಾಗಿಯೇ ಬಾಯಿಯಲ್ಲಿ ಬಂದವು.

ಶಾನ್‌ಮಿಂಗ್ ಹಾಗೆ ನುಡಿದ ತಕ್ಷಣವೇ ಗೋಡೆಯ ಗೂಟಕ್ಕೆ ತಗಲುಹಾಕ್ಕಿದ್ದ ಕೊಡೆಯು ಕದಲಿತು. "ಅಷ್ಟು ಮಾತ್ರ ಗ್ರಹಿಸಲಿಲ್ಲವೇ ? ನಿನ್ನ ಹಿತ ಕೋರಿಯೇ ಆರೀತಿ ಮಾಡಿದೆ. ನಿನಗೆ ತಕ್ಕ ವರ ಯಾರೋ ನನಗೆ ಗೊತ್ತು. ಅಂತಹವ ನಿನಗೆ ದೊರಕುವವರೆಗೂ ಹೀಗೇ ನಡೆಯುತ್ತಿರುತ್ತದೆ. ತಕ್ಕವರ ಬಂದ ದಿನ ನಾನು ಸುಮ್ಮನಿರುವೆ. ಈ ಸಂಗತಿ ನೆನಪಿಡು" ಎಂದು ನುಡಿಯಿತು.

ಈ ಮಾತು ಕೇಳಿ ಶಾನ್‌ಮಿಂಗ್ ಆಶ್ಚರ್ಯಕ್ಕೆ ಎಣೆಯೇ ಇಲ್ಲ. ಕೊಡೆಯೆಂದರೇನು ? ನುಡಿಯುವುದೆಂದರೇನು ? ಸರಿ, ನೋಡೋಣ—ಎಂದುಕೊಂಡು ಈ ವಿಷಯವನ್ನು ಕೂಡ ತಂದೆ ತಾಯಿಗೆ ತಿಳಿಸದೆ ಗುಟ್ಟಾಗಿಟ್ಟಳು. ಮಾರುದಿನ ತಂದೆಯ ಸ್ನೇಹಿತ ತನ್ನ ಮಗನೊಡನೆ ತನ್ನ ಊರಿಗೆ ಹೊರಟು ಹೋದನು.

ಹಾಗೇ ಕೆಲದಿನಗಳು ಕಳೆದುವು. ಒಂದು ದಿನ ಉದ್ಯಾನದಲ್ಲಿ ವಿಹಾರಕ್ಕಾಗಿ ಶಾನ್‌ಮಿಂಗ್ ಹೋದಳು. ಹೂಬಳ್ಳಿ ಮರಗಿಡಗಳ ಅಂದಚೆಂದಗಳನ್ನು ನೋಡುತ್ತಾ ಹಾಗೇ ನಡೆದಳು. ಎಷ್ಟೋ ಹೊತ್ತು ನಡೆದ ಮೇಲೆ ಮನೆಗೆ ಹಿಂತಿರುಗುವ ಯೋಚನೆಯುಂಟಾಯಿತು. ಆಗಲೇ ತಾನು ದಾರಿ ತಪ್ಪಿ ಕಾಡಿಗೆ ಬಂದಿರುವೆನೆಂದು ಆಕೆಗೆ ಗೊತ್ತಾಯಿತು. ಏನು ಮಾಡುವಳು ? ಲಗುಬಗನೆ ಮನೆಗೆ ದಾರಿ ಹುಡುಕುತ್ತಾ ಹೊರಟಳು. ಇಷ್ಟರಲ್ಲಿ ಪಕ್ಕದಿಂದ ಯಾರೋ ತನ್ನ ಕೈ ಹಿಡಿದುಕೊಂಡಂತಾಯಿತು. ಭಯದಿಂದ ಕಂಪಿಸಿ ತಿರುಗಿ ನೋಡಲು, ಮರದ ಆಕಾರದಲ್ಲಿದ್ದ ಒಂದು ಭಯಂಕರ ಸ್ವರೂಪ ಕಂಡುಬಂದಿತು. ಆನಂತರ ಏನು ನಡೆಯಿತೆಂಬುದನ್ನು ಚಿತ್ರದೊಡನೆ ಮುಂದಿನ ತಿಂಗಳು ನೋಡಿರಿ.

## ಒಂದೇ ಗೆರೆಯ ಚಿತ್ರ



ಜಿ. ಮುನಿಕೃಷ್ಣಯ್ಯ - ತಿರುಪತಿ

## ಉಪಾಯ

೧

ಗಂಟಲಾರಿ ಕಾಗೆಯೊಂದು
ನೀರನರಸಿ ಬಂದಿತು
ಅಲೆದು ಅಲೆದು ನೀರು ಸಿಗದೆ
ಭಾರಿ ಬಳಲಿ ಹೋಯಿತು

೨

ತೋಟದೊಂದು ಮೂಲೆಯಲ್ಲಿ
ಹೂಜಿಯೊಂದ ಕಂಡಿತು
ಆಸೆಯಿಂದ ಹಾರಿ ಬಂದು
ಇಣಿಕಿ ಇಣಿಕಿ ನೋಡಿತು

೩

ಹೂಜಿಯಲ್ಲಿ ನೀರ ಕಂಡು
ಕಾಗೆಗಾಸೆ ಹೆಚ್ಚಿತು
ಕೊಕ್ಕು ನೀರಿಗೆಟಕದಿರಲು
ಸುತ್ತ ಮುತ್ತ ನೋಡಿತು

೪

ಕಲ್ಲ ಹರಳ ಹೆಕ್ಕಿ ತಂದು
ಹೂಜಿಯೊಳಗೆ ಇಕ್ಕಿತು
ನೀರು ಉಕ್ಕಿ ಮೇಲೆ ಬರಲು
ಮೋದದಿಂದ ಕುಡಿಯಿತು.

[—ಯು. ಚಿತ್ರಲೇಖ, ಮೂಡಬಿದ್ರಿ.]

# ಮೋಟು ಬಾಲ

ಒಂದೂರಿನಲ್ಲಿ ಹನುಮಯ್ಯ ಅಂತ ಒಬ್ಬ ಇದ್ದ. ಅವನ ಮಗ ಭೀಮಣ್ಣ. ಒಂದು ದಿನ ತಂದೆ ಮತ್ತು ಮಗ ಇಬ್ಬರೂ ತಮ್ಮ ಕುದುರೆಗಳ ಮೇಲೆ ಕುಳಿತು ಹತ್ತಿರದ ಹಳ್ಳಿಗೆ ಹೊರಟರು. ಹಳ್ಳಿಯಲ್ಲಿ ಸಾಯಂಕಾಲದ ವರೆಗೆ ಕೆಲಸವಿದ್ದುದರಿಂದ ಅವರು ಒಬ್ಬ ರೈತನ ತೋಟದಲ್ಲಿ ಕುದುರೆಗಳನ್ನು ಮೇಯಲು ಬಿಟ್ಟರು. ಆಗ ರೈತನಿಗೆ ಅವುಗಳ ಮೇವಿಗೆ ದುಡ್ಡನ್ನು ಕೊಡುವುದಾಗಿ ಅವರು ಹೇಳಿದರು.

ಸಾಯಂಕಾಲ ಅವರು ಕೆಲಸ ಮುಗಿಸಿಕೊಂಡು ಆ ಕುದುರೆಗಳನ್ನು ಕರೆದುಕೊಂಡು ಊರಿಗೆ ಹಿಂದಿರುಗುವಾಗ ತಂದೆ "ಕುದುರೆಗಳ ಮೇವಿಗೆ ಏನು ಕೊಡಬೇಕು?" ಎಂದು ರೈತನನ್ನು ಕೇಳಿದ.

"ಸ್ವಾಮಿ, ದೊಡ್ಡ ಬಾಲದ ಕುದುರೆಗೆ 12 ಆಣೆ ಮತ್ತು ಮೋಟು ಬಾಲದ್ದಕ್ಕೆ 6 ಆಣೆ" ಎಂದು ರೈತ ಹೇಳಿದ.

ಇಬ್ಬರಿಗೂ ಅತ್ಯಾಶ್ಚರ್ಯವಾಯಿತು. ಆಗ ಮಗನು "ಅಯ್ಯೋ, ಎರಡು ಕುದುರೆಗಳೂ ಒಂದೇ ಎತ್ತರದವು. ಎರಡು ಕುದುರೆಗಳೂ ಒಂದೇ ಸಮನಾಗಿ ಮೇದಿವೆ. ಬಾಲದಲ್ಲಿನ ವ್ಯತ್ಯಾಸಕ್ಕೂ ದುಡ್ಡಿಗೂ ಏನು ಸಂಬಂಧ?" ಎಂದು ಹೇಳಿ ನಕ್ಕನು.

"ಕ್ಷಮಿಸಿ, ಸ್ವಾಮಿ, ಉದ್ದದ ಬಾಲದ ಕುದುರೆ ಹುಲ್ಲನ್ನು ಮೇಯುತ್ತಾ ಬಾಲದಿಂದ ನೊಣವನ್ನು ಓಡಿಸಬಹುದು. ಆದರೆ ಮೈಮೇಲೆ ಕುಳಿತ ನೊಣಗಳನ್ನು ಮೋಟು ಬಾಲದ ಕುದುರೆ ಬಾಯಿಯಿಂದಲೇ ಓಡಿಸಬೇಕು, ಮತ್ತು ಮೇಯಲೂ ಬೇಕು. ಆದ್ದರಿಂದ ಮೋಟು ಬಾಲದ್ದು ದೊಡ್ಡದರ ಅರ್ಧ ಮೇದಿದೆ" ಎಂದು ರೈತ ಹೇಳಿದ.

ಇದನ್ನು ಕೇಳಿ ಅಪ್ಪ ಮಕ್ಕಳಿಬ್ಬರೂ ಬಿದ್ದು ಬಿದ್ದು ನಕ್ಕರು. ರೈತನ ಬುದ್ಧಿಶಕ್ತಿಗೆ 5 ರೂ. ಇನಾಮು ಕೊಟ್ಟರು.

—ಎ. ವಸುಂಧರ, ಮಂಡ್ಯ.

ಈ ದಿನವೆ ನೋಡಿ




(ತೆಲುಗು)

ಡೈರೆಕ್ಷನ್.. ಪ್ರಸಾದ್

ನಿರ್ಮಾಪಕರು... ನಾಗಿರೆಡ್ಡಿ...ಚಕ್ರಪಾಣಿ

Printed by B. NAGIREDDI at the B. N. K. Press Ltd., Madras 24, and Published by him from Chandamama Publications, Madras 24, Controlling Editor : SRI CHAKRAPANI



Chandamama, April '52 Photo by A. L. Syed

'ನಾನೇ!'

